

# ಶ್ರದ್ಧಾಂಜಲಿ

ಸಿದ್ದವನಹಳ್ಳಿ ಕೃಷ್ಣಶರ್ಮ

‘ಎಷ್ಟೋ ವರ್ಷವಾಯಿತು. ನಾನೂ ಕಸ್ತೂರಿ ಬಾ ಮಾತಾಡಿಕೊಂಡು ನಮ್ಮ ದಾಂಪತ್ಯವನ್ನು ಬಿಟ್ಟುಬಿಟ್ಟದೇವೆ. ಅಂದಿನಿಂದ ಆಕೆ ನನಗೆ ಹೆಂಡತಿಯಾಗಿಲ್ಲ. ೪೦ ವರ್ಷದ ಕೆಳಗೆ ನಾನು ಅನಾಥನಾದೆ; ಸುಮಾರು ೩೦ ವರ್ಷದಿಂದ ಆಕೆ ನನ್ನ ತಾಯಾಗಿ ನಡೆದುಕೊಂಡಿದಾಳೆ. ತಾಯಿ, ಪರಿಚಾರಿಕೆ, ಬಾಣಸಗಿತ್ತಿ, ಕೆಲಸಗಿತ್ತಿ, ಎಲ್ಲವೂ ಆಗಿದಾಳೆ. ನಮ್ಮ ಬಾಳು ಮೊದಲಾದಾಗಲೇ ನಾವು ಒಂದು ಏರ್ಪಾಡು ಮಾಡಿಕೊಂಡೆವು. ಗೌರವವೆಲ್ಲ ನನಗೆ, ದುಡಿತವೆಲ್ಲ ಆಕೆಗೆ. ಇಲ್ಲದಿದ್ದರೆ ಇಬ್ಬರೂ ಸಮವೆಂದು ಹೊರಟಿದ್ದರೆ ನನಗೆ ಹೊಟ್ಟೆಗಿಲ್ಲದೆ ಬಟ್ಟೆಯಿಲ್ಲದೆ ಹೋಗುತ್ತಿತ್ತು’

—**ಗಾಂಧೀಜೀ.**

[illegible] ಕಸ್ತೂರಿಬಾಯಿ ಜನನ
೧೮೮೩ ಮದುವೆ
೧೮೮೫ ಮೊದಲ ಮಗು—ಮೂರು ನಾಲ್ಕು ದಿನದಲ್ಲೆ ತೀರಿಹೋಯಿತು.
೧೮೮೮ ಹೀರಾಲಾಲನ ಜನನ. ಗಂಧೀಜೀ ಇಂಗ್ಲೆಂಡಿಗೆ ಹೋದರು.
೧೮೯೧ ಸಂಸಾರ ಹೂಡಿದ್ದು. ಮೊದಲು ರಾಜಕೋಟಿ, ಕಸ್ತೂರಿಬಾಯಿ ಆಮೇಲೆ ಬೊಂಬಾಯಿ.
೧೮೯೩ ಗಾಂಧೀಜೀ ಒಂಟಿಯಾಗಿ ದಕ್ಷಿಣ ಆಫ್ರಿಕಾಕ್ಕೆ ಹೊರಟರು.
ಮಣಿಲಾಲನ ಜನನ
೧೮೯೬ ಕಸ್ತೂರಿಬಾ—ಹೀರಾಲಾಲ, ಮಣಿಲಾಲರೊಂದಿಗೆ ದಕ್ಷಿಣ ಆಫ್ರಿಕಾಕ್ಕೆ ಗಂಡನೊಂದಿಗೆ ಇರಲು ಪಯಣ ಬೆಳೆಸಿದಳು.
೧೮೯೮ ಕ್ರಿಸ್ತಾನ ಗುಮಾಸ್ತೆಯ ಮಲಮೂತ್ರ ಪಾತ್ರೆಯ ವಿರಸ.
ರಾಮದಾಸನ ಜನನ.
ದೇವಿದಾಸನ ಜನನ.
೧೯೦೦ ಗಾಂಧೀಜಿಗೆ ಬ್ರಹ್ಮಚರ್ಯದ ಸ್ಫೂರ್ತಿ.
೧೯೦೪ ಫೀನಿಕ್ಸ್ ಆಶ್ರಮ ಪ್ರಾರಂಭ.
೧೯೦೬ ಬ್ರಹ್ಮಚರ್ಯ ವ್ರತ ತೊಟ್ಟಿದ್ದು.
೧೯೦೭ ಸತ್ಯಾಗ್ರಹ ಕಸ್ತೂರಿಬಾ ಸೆರೆಗೆ ೨ ಸಲ ಹೋದರು.
೧೯೧೩ ಮೊದಲು ಸಲ ಸೆರೆಗೆ ೩ ತಿಂಗಳು.
೧೯೦೮ ಪಠಾನರು ಗಾಂಧೀಜಿಯ ತಲೆ ಒಡೆದದ್ದು.
೧೯೧೦ ಟಾಲ್ಸ್ ಟಾಯ್ ಫಾರಂ.
೧೯೧೫ ಹಿಂದುಸ್ಥಾನಕ್ಕೆ ಹಿಂದಿರುಗಿದ್ದು. ಆಶ್ರಮ ಸ್ಥಾಪನೆ—ಅಸ್ಪೃಶ್ಯತೆಯನ್ನು ಬಾ ಬಿಟ್ಟರು. ಲಕ್ಷ್ಮಿ ಮಗಳಾದಳು.
೧೯೧೭ ಚಂಪಾರಣ್ಯದಲ್ಲಿ ಬಾ ಸ್ವಯಂಸೇವಿಕೆ.
೧೯೨೧ ಅಸಹಕಾರ.
೧೯೨೨ ಗಾಂಧೀಜೀ ದಸ್ತಗಿರಿಯಾದಮೇಲೆ ಭಾರತ ಪ್ರವಾಸ.
೧೯೨೪ ಗಾಂಧೀಜಿಯ ೨೧ ದಿನದ ಉಪವಾಸ.
೧೯೩೨ ಜನವರಿ—ಬಾಗೆ ೬ ವಾರ ಶಿಕ್ಷೆ. ಮಾರ್ಚಿ—೬ ತಿಂಗಳ ಶಿಕ್ಷೆ.
೧೯೩೫ ಸೇವಾಗ್ರಾಮದಲ್ಲಿ ಆಶ್ರಮ.
೧೯೩೮ ಕಸ್ತೂರಿಬಾ, ದುರ್ಗಾಬೇನ್ ಪೂರಿದರ್ಶನ ಮಾಡಿದ್ದಕ್ಕಾಗಿ ಬಾಪೂಗೂ ಮಹಾದೇವ ಭಾಯಿಗೂ ವಿರಸ.
೧೯೩೯ ರಾಜಕೋಟೆಯ ಸತ್ಯಾಗ್ರಹ.
೧೯೪೨ ಕಡೆಯ ದಸ್ತಗಿರಿ.
೧೯೪೪ ಮರಣ.

# ಶ್ರದ್ಧಾಂಜಲಿ

ಮಹಾಪುರುಷರ ಸಂಗ ಹೆಜ್ಜೇನು ಸವಿದಂತೆ ಎಂದು ಹೇಳಿದಾಗ ಸರ್ವಜ್ಞಮೂರ್ತಿ ತನ್ನ ಬಿರುದನ್ನು ಮರೆತಿರಬೇಕು. ಇಲ್ಲವೆ, ಎಲ್ಲ ಬಲ್ಲವರಿಲ್ಲ ಎಂದು ತನಗೆ ತಾನೇ ಸಮಾಧಾನ ಹೇಳಿಕೊಂಡಿರಬೇಕು. ತಿಳಿದವನು ಹಾಗೆ ಹೇಳಬಹುದೇ ತಾನು ?

ಶ್ರೀರಾಮಚಂದ್ರನಿಗಿಂತ ಸಜ್ಜನ ಉಂಟೆ ? ಅಂಥವನ ಕೈ ಹಿಡಿದು ಸೀತಾದೇವಿ ಪಟ್ಟ ಸುಖವೇನು ? ಹದಿನಾಲ್ಕು ವರ್ಷ ವನವಾಸ, ಅದರಲ್ಲಿ ರಾಕ್ಷಸಪೀಡೆ, ಅಶೋಕವನದ ಶೋಕ–ಇದನ್ನೆಲ್ಲ ಮೀರಿಸಿ ಅಗ್ನಿಪರೀಕ್ಷೆ. ಅಲ್ಲಿಗಾದರೂ ಮುಗಿಯಿತೆ ? ಮುಂದೆ ಉತ್ತರಕಾಂಡದ ಭೀಷಣ.

ಮಹಾಪುರುಷರ ಸಂಗ, ಶುಶ್ರೂಷೆ ತಂತಿಯಮೇಲೆ ನಡದಂತೆ. ತೂಕ ತಪ್ಪಿದರೆ ಮುಗಿಯಿತು. ಅದು ಅಸಿಧಾರ ವ್ರತ ; ಅಲ್ಲ, ಅಗ್ನಿಪರೀಕ್ಷೆಯೇ ಸರಿ. ಅದರಲ್ಲೂ ಎಲ್ಲ ಸಾಧುಸಂತರದೂ ಒಂದು ತೂಕವಾದರೆ ಗಾಂಧೀಜೀ ಒಂದು ತೂಕ. ತಮ್ಮ ಸಹವಾಸದಲ್ಲಿರುವವರೆಲ್ಲ ಉತ್ತಮ ಜಾತಿಯ ಜನ ರಾಗಬೇಕೆಂದು ಅವರಿಗೆ ತುಂಬಾ ಆಸೆ. ಆ ಆಸೆ ಅನೇಕ ಸಲ ಸುತ್ತಲಿನ ವರಿಗೆ ಪ್ರಾಣಸಂಕಟವಾಗುವುದುಂಟು. ಬಂಗಾರಕ್ಕೆ ಬಣ್ಣ ಕೊಡಲು ಪುಟಕ್ಕೆ ಹಾಕುವಂತೆ ಸಂಗಾತಿಗಳನ್ನು ಬಾಪು ಪುಟಕ್ಕೆ ಹಾಕುತ್ತಾರೆ. ಆ ಸಂಕಟದಲ್ಲಿ ಸಿದ್ಧಿಯಿದೆ, ಆ ಪುಟದಲ್ಲಿ ಶುದ್ಧಿ ಇದೆ.

ಕಸ್ತೂರಿಬಾನನ್ನು ನೋಡಿದರೆ ಆಕೆ ಈ ಮಹಾ ಸಾಹಸ ಮಾಡಿದ ಧೀರೆ ಎನಿಸುವುದೇ ಇಲ್ಲ. ಆ ಮೋರೆಯಲ್ಲಿ ಅಂಥ ಅಟ್ಟಹಾಸದ ಗುರುತೇ ಇಲ್ಲ. ಸರಲವಾದ ಮುಖಮುದ್ರೆ, ವಾತ್ಸಲ್ಯ ತುಂಬಿದ ಕಣ್ಣು. ವಯಸಿ ನಿಂದ, ವಯಸಿಗೆ ತಕ್ಕ ಅನುಭವದಿಂದ ಬಂದ ಒಂದು ಅಪೂರ್ವ ಶಾಂತಿ ಆ ಮೋರೆಯಲ್ಲಿ ಕಾಣುತ್ತದೆ. ಲಂಕೆಯಲ್ಲಿ ಅಗ್ನಿಪಾವನಳಾಗಿ ತುಂಬಿದ ಮನಸ್ಸಿನಿಂದ ಹಿಗ್ಗಿದ ಎದೆಯಿಂದ ರಾಮನ ಬಳಿಗೆ ನಡೆದುಬಂದ ಸೀತಾ

ದೇವಿಯ ಕಣ್ಣಿನ ಮಿಂಚಿನ ಗೊಂಚಲು ಇಲ್ಲಿ ಕಾಣುವುದಿಲ್ಲ. ವಾಲ್ಮೀಕಿ ಮುನಿಯ ಆಶ್ರಮದಲ್ಲಿ ಲವಕುಶರೊಡನೆ ಉಳಿದ ಮುನಿಕುಮಾರರೊಡನೆ ರಾಮಾಯಣವನ್ನು ಹಾಡುತ್ತಾ ಅವರ ನಡುವೆ ಕುಳಿತ ಸೀತೆಯ ತುಂಬು ತಾಯ್ತನದ ನೋಟ ನೆನಪಾಗುತ್ತದೆ. ಆಶ್ರಮದಲ್ಲಿ ತನ್ನ ಮೊಮ್ಮಗನೊಡನೆ ಉಳಿದ ಮಕ್ಕಳೊಡನೆ ನಗುತ್ತಾ ನಲಿದಾಡುತ್ತ ನೂಲು ತೆಗೆವಾಗ, ಆ ನೋಟ ವನ್ನು ನೋಡಿದರೆ ರಾಮಾಯಣದ ಈ ಚಿತ್ರ ಮತ್ತೆ ಮತ್ತೆ ನೆನಪಿನಲ್ಲಿ ಮೂಡಿಬರುತ್ತದೆ.

ಹೌದು. ಸೀತೆಯಂತೆ ಚಂದ್ರಮತಿಯಂತೆ ಕಸ್ತೂರಿಬಾ ಕಷ್ಟದಲ್ಲೂ ಸುಖ ದಲ್ಲೂ ಗಂಡನನ್ನು ನೆರಳಿನಂತೆ ಹಿಂಬಾಲಿಸಿದಾಳೆ. ಹೆಣ್ಣಿನ ನಿಜವಾದ ರೀತಿ ಅದೇ. ಗಂಡಾನೆ ಕೆಸರಿನಲ್ಲಿ ಹೊಕ್ಕರೂ ಅದರ ಹೆಣ್ಣು ಅದನ್ನು ಬಿಡದು; ಬೆನ್ನು ಅಂಟಿಯೇ ಇರುತ್ತದೆ. ಚಂದ್ರ ರಾಹುಗ್ರಸ್ತನಾದರೆ ಚಿಕ್ಕೆ ದೂರ ಸರಿದಾವೆ? ವನವಾಸಕ್ಕೆ ಹೋಗುವ ಮುನ್ನ ಸೀತೆ ಕೇಳಿದಳಂತೆ ರಾಮನನ್ನು: 'ಯಾವಾಗಲೂ ನಿನ್ನ ಪಾಲಿನದರಲ್ಲಿ ಅರ್ಧಪಾಲು ಕೊಟ್ಟಿ ದೀಯೆ. ಈ ಕಷ್ಟದಲ್ಲೇಕೆ ಬೇಡ?' ಕಸ್ತೂರಿಬಾ ತನ್ನ ಅರ್ಧಪಾಲಿನ ಕಷ್ಟವನ್ನು ಸಂತೋಷದಿಂದ ಹೊತ್ತಿದಾಳೆ, ಹೊತ್ತು ತನ್ನ ಬಾಳನ್ನು ಹಸನು ಮಾಡಿಕೊಂಡಿದಾಳೆ. ಅದರ ಫಲವಾಗಿ ಅಮಿಂದ ಶಾಂತಿಯಲ್ಲಿ ಹೀಯು ತ್ತಿದಾಳೆ.

ಗಾಂಧೀಜೀ ಆಕೆಯನ್ನು ಕಾಡಿದಷ್ಟು ಯಾರೂ ತನ್ನ ಹೆಂಡತಿಯನ್ನು ಪೀಡಿಸಲಿಕ್ಕಿಲ್ಲ. ಯಾವ ಗಳಿಗೆಯಲ್ಲಿ ಏನು ಅನಾಹುತವಾದೀತೋ, ಎಲ್ಲಿ ದಾಂಪತ್ಯಜೀವನ ಮುರಿದೀತೋ ಎಂಬ ಹೆದರಿಕೆ ಕಸ್ತೂರಿಬಾಗೆ ಬಹಳಕಾಲ ಇದ್ದಿರಬೇಕು. ಗಾಂಧೀಜಿಗೆ ತನ್ನಂತೆ ತನ್ನವರು ಆಗಬೇಕೆಂಬ ಹಟ ಬಹಳ. ತನ್ನ ಸಿದ್ಧಾಂತಗಳನ್ನು ತನ್ನವರೇ, ತನ್ನ ಮನೆಯವರೇ ಅನುಸರಿಸದೆ ಹೋದರೆ ಜಗತ್ತಿಗೆ ಹೇಗೆ ಅವನ್ನು ಉಪದೇಶ ಮಾಡುವದು?

ಸತ್ಯಾಗ್ರಹಾಶ್ರಮವನ್ನು ಹೂಡುವಾಗ ಗಂಡಹೆಂಡಿರ ನಡುವೆ ದೊಡ್ಡ ದೊಂದು ಗೊಂದಲವೇ ಆಯಿತು. ಆಶ್ರಮದಲ್ಲಿ ಅಸ್ಪೃಶ್ಯತೆಯನ್ನು ಪಾಲಿಸ ಬಾರದೆಂದು ಗಾಂಧೀಜಿಯ ನಿರ್ಧಾರ. ಆ ಸಂಕಲ್ಪ ಬರೀ ಗಾಳಿಗೋಪುರ ವಾಗಬಾರದು. ತಾವು ಮಾಡಿದ ಯಾವ ಸಂಕಲ್ಪವೂ ಆಡಿದ ಯಾವ

ಮಾತೂ ರೂಪುಗೊಳ್ಳದೆ ವ್ಯರ್ಥವಾಗಿ ಜೊಳ್ಳಾಗಿ ಹೋಗುವದು ಗಾಂಧೀಜಿಯ ಲೆಕ್ಕದಲ್ಲಿಲ್ಲ. ಅಂಥ ಮಾತು ಆಡದೆ ಬಿಟ್ಟಾರು, ಅಂಥ ವಿಚಾರದ ವೇಗವನ್ನು ತಡೆದುಕೊಂಡಾರು. ಅಸ್ಪೃಶ್ಯತೆಯ ಬಗ್ಗೆ ಅವರು ನಿರ್ಧಾರ ಮಾಡಿದುದೇ ತಡ, ತಮ್ಮ ವ್ಯವಹಾರದಲ್ಲಿ ಅದನ್ನು ಹರಿಯಿಸಿದರು. ಆಶ್ರಮದಲ್ಲಿ ಹರಿಜನರ ಕುಟುಂಬವೊಂದನ್ನು ತಮ್ಮ ಜೊತೆಗೆ ಇರಲು ತಂದಿಟ್ಟರು. ಕಸ್ತೂರಿ ಬಾಗೆ ಇದು ಸರಿ ಕಾಣಲಿಲ್ಲ. ಎಷ್ಟಾದರೂ ಹೆಣ್ಣು. ಧರ್ಮ ಸಂಪ್ರದಾಯಗಳನ್ನು ಮುರಿಯುವುದೇ ಹೆಣ್ಣಿನ ಮನಸಿಗೆ—ಅದರಲ್ಲೂ ಇಪ್ಪತ್ತೈದು ಮೂವತ್ತು ವರ್ಷಗಳ ಕೆಳಗೆ—ಒಪ್ಪದ ಮಾತು; ಹೋಗಲಿ, ಮುರಿದರೂ ಅವಕ್ಕೊಂದು ಹದ ಬೇಡವೆ? ಮುಟ್ಟಬಾರದ ಹೇಸಿ ಜನರನ್ನು ಮುಟ್ಟಿದರೆ ಮುಟ್ಟಲಿ ಎಂದರೆ ಅವರನ್ನು ಮನೆಯೊಳಗೇ ಸೇರಿಸುವುದೇ? ಕಸ್ತೂರಿ ಬಾ ಗಂಡನ ಮಾತನ್ನು ಬಲವಾಗಿ ವಿರೋಧಿಸಿದಳು. ಇಬ್ಬರ ನಡುವೆ ದಾಟಲಾರದ ಹೊಳೆಯೊಂದು ಹರಿದಂತಾಯಿತು. ಕಸ್ತೂರಿ ಬಾನ ಕಣ್ಣೀರಾಗಲಿ ದಾಂಪತ್ಯದಲ್ಲಿ ಸುಸುಳಬಹುದಾದ ದೀರ್ಘ ವಿರಸವಾಗಲಿ ಗಾಂಧೀಜಿಯ ಮನಸ್ಸನ್ನು ಅಲುಗಾಡಿಸಲಿಲ್ಲ. ತಮ್ಮ ಸಿದ್ಧಾಂತಕ್ಕಾಗಿ ಎಂಥ ಬಲಿದಾನವನ್ನಾದರೂ ಕೊಡುವ ಸಾಧಕ ಜಾತಿ ಅವರದು. ಹೆಂಡತಿಯಮೇಲಿನ ಪ್ರೇಮ ತಾವು ಆರಿಸಿಕೊಂಡ ಕರ್ತವ್ಯಕ್ಕೆ ಅಡ್ಡಿ ಬಂದರೆ ಅದು ಅಲ್ಪಗುಣ, ಕ್ಲೈಬ್ಯವಾದೀತು. ಗಾಂಧೀಜೀ ಹೆಂಡತಿಗೆ ಹೇಳಿದರು: ‘ಆಶ್ರಮದಲ್ಲಿರುವವರು ಹೀಗೆಯೇ ನಡೆಯಬೇಕು ಎಂದು ಕೆಲವು ನಿಯಮಗಳನ್ನು ಮಾಡಲಾಗಿದೆ. ಅವು ಯಾರಿಗೂ ತಪ್ಪಿದ್ದಲ್ಲ. ನಿನಗೆ ಅದರಂತೆ ನಡೆಯುವದಾಗದಿದ್ದರೆ ಬೇರೆಯಾಗಿ ಇರು. ಬೇರೆ ಮನೆಮಾಡಿ ಅನುಕೂಲ ಮಾಡಿಕೊಡುತ್ತೇನೆ.’

ಕಸ್ತೂರಿ ಬಾ ಸಂತೋಷದಿಂದ ಆಶ್ರಮನಿಯಮಗಳಿಗೆ ಒಪ್ಪಿಕೊಂಡಳು. ತನಗೆ ಎಲ್ಲಕ್ಕಿಂತ ಹಿರಿದಾದ ಧರ್ಮ ಪತಿಸೇವೆ. ಧರ್ಮ ಶಾಸ್ತ್ರ ವಿವೇಚನೆ ಮಾಡುವ ಯೋಗ್ಯತೆ ತನ್ನದೆ? ಧರ್ಮಾಧರ್ಮದ ಹೊಣೆ ಗಂಡನಿಗೇ ಇರಲಿ. ತನಗೆ ಪತಿಸೇವೆಯೊಂದೆ ಸಾಕು ಎಂದು ಕೊಂಡಳೇನೋ. ಮನಸ್ಸನ್ನು ಒಗ್ಗಿಸಿಕೊಂಡಳು. ಹರಿಜನರ ಹುಡುಗಿ ‘ಲಕ್ಷ್ಮಿ’ ಆಕೆಗೆ ಮಗಳಾದಳು.

ಮೊದಲು ಗಂಡನಂತೆ ಅಧಿಕಾರ ನಡೆಸಿದವರು ಮುಂದೆ ಕಸ್ತೂರಬಾಗೆ

ಗಾಂಧೀಜೀ ಮಣಿದುಹೋದರು. ಗಂಡಿನ ಅಧಿಕಾರಕ್ಕೆ ಹೆಣ್ಣು ಒಳಗಾಗ ದಿದ್ದರೆ ನಮ್ಮ ಸಮಾಜದಲ್ಲಿ ಪರಿಣಾಮವುಂಟೆ? ಅದರಲ್ಲೂ ಗಂಡನಿಗೆ ಹೆಂಡತಿಯಮೇಲೆ ಸರ್ವಾಧಿಕಾರ ತಾನೆ. ಮಾತುಮಾತಿನಲ್ಲೂ ಗಾಂಧೀಜೀ ಗೆದ್ದರು; ಕಸ್ತೂರಿಬಾ ಸೋತಳು. ಆದರೆ ಇವರು ಗೆದ್ದರೂ ಸೋತರು; ಆಕೆ ಸೋತರೂ ಗೆದ್ದಳು. ಹೆಣ್ಣು ಗೆಲ್ಲುವ ದಾರಿ ಸೋಲಿನದು, ಒಲವಿನದು. ಅದು ಇದಿರಾಳಿಯನ್ನು ಕಾಲ ಕೆಳಗೆ ತುಳಿದು ಒರಸಿ ಹಾಕುವ ಹಿಂಸೆಯ ಹಾದಿ ಯಲ್ಲ. ಮೇಲೆತ್ತಿ ಎದೆಗವಚಿ ಲಾಲಿಸುವ ಅಹಿಂಸೆಯ ಒಲವಿನ ದಾರಿ. ಆ ಸೋಲಿನಲ್ಲಿ ಗೆಲವಿನ ಮಂತ್ರವಿದೆ.

ಒಂದು ಸಲ ಗಾಂಧೀಜೀ ಕಸ್ತೂರಿಬಾನನ್ನು ಬಹಿರಂಗವಾಗಿ ಪೂರಾ ನಾಚಿಕೆಗೆ ಈಡು ಮಾಡಿದರು. ಅವಮಾನದ ನೀರಿನಲ್ಲಿ ಅದ್ದಿಬಿಟ್ಟರು. ಸತ್ಯಾಗ್ರಹ ಧರ್ಮದ ನಿಯಮಗಳಲ್ಲಿ ಅಸಂಗ್ರಹ ಒಂದು ಮುಖ್ಯವ್ರತ. ನಾಳಿನ ಚಿಂತೆಯಿಲ್ಲದೆ ಈ ದಿನ ಬಾಳಬೇಕು. ನಾಳಿನದು ದೇವರಿಗೆ ಸೇರಿದ ಭಾರ. ಆಶ್ರಮದಲ್ಲಿ ಯಾರೂ ಒಂದು ಬಿಡಿಕಾಸನ್ನೂ ಸಂಗ್ರಹಬುದ್ಧಿಯಿಂದ ತೆಗೆದಿಡಬಾರದು. ಕಸ್ತೂರಿಬಾ ಒಂದು ಸಲ ಎರಡೋ ಮೂರೋ ರೂಪಾಯಿ ಯಾವಾಗಲಾದರೂ ಪ್ರಸಂಗಬಿದ್ದಾಗ ಉಪಯೋಗಕ್ಕೆ ಇರಲಿ ಎಂದು ತೆಗೆದು ಇಟ್ಟಿದ್ದರು. ಇದು ಗಂಡನಿಗೆ ತಿಳಿಯಿತು. ತನ್ನ ಸಹಧರ್ಮಚಾರಿಣಿಯೇ ಹೀಗೆ ಮಾಡಿದುದು ಗಾಂಧೀಜಿಗೆ ತುಂಬಾ ನೋವಾಯಿತು. ತಮ್ಮಲ್ಲಿ ಅಸಂಗ್ರಹ ಬುದ್ಧಿ ಪೂರ್ಣವಾಗಿ ಬೆಳೆದಿದ್ದರೆ ಆಕೆಗೆ ಈ ಬುದ್ಧಿ ಬರುತ್ತಿತ್ತೇ? ಆಕೆ ಮಾಡಿದ ವ್ರತಭಂಗ ತಮ್ಮ ಅಪೂರ್ಣತೆಯ ಕುರುಹು. ಆ ದಿನ ಸಂಜೆಗೆ ಪ್ರಾರ್ಥನೆಯ ಹೊತ್ತಿನಲ್ಲಿ ಎಲ್ಲರ ಇದಿರಿನಲ್ಲಿ ಗಾಂಧೀಜೀ ದುಃಖ ತುಂಬಿದ ಎದೆಯಿಂದ ಕಸ್ತೂರಿ ಬಾನ ತಪ್ಪನ್ನು ವಿವರಿಸಿ ಆಕೆಯನ್ನು ದಂಡಿಸಿದರು. ಆಶ್ರಮವಾಸಿಗಳೆಲ್ಲ ಚಿಕ್ಕವರು. ಆಕೆಯನ್ನು ತಾಯಿ ಎಂದು ತಿಳಿದು ನಡೆದು ಕೊಂಡವರು. ಅವರಿದಿರಿನಲ್ಲಿ ಈ ಅವಮಾನದ ಶಿಕ್ಷೆ. ಹೇಗಿರಬೇಕು ಆಕೆಯ ಮನಸ್ಸು!

ಇನ್ನೊಂದು ಸಲ ಯಾರೋ ಬೇನೆ ಬಿದ್ದರು. ರೋಗಿಗೆ ಸರಿಯಾದ ಆರೈಕೆ ನಡೆಯಲಿಲ್ಲವೆಂದು ಗಾಂಧೀಜಿಗೆ ಅನಿಸಿತು. ಹೆಂಡತಿಯನ್ನು ಕೇಳಿದರು. ಆಕೆಗೆ ಆ ಮನುಷ್ಯ ಬೇನೆಬಿದ್ದ ಸುದ್ದಿಯೇ ಗೊತ್ತಿರಲಿಲ್ಲ. ಆಶ್ರ

ಮದ ಯಜಮಾನಿ ಆಕೆ. ಆಕೆ ಈ ಸುದ್ದಿ ತಿಳಿದುಕೊಳ್ಳದಿದ್ದುದು ಅವರಿಗೆ ಸರಿಕಾಣಲಿಲ್ಲ. ಗಾಂಧೀಜಿಯ ಸತ್ಯದೃಷ್ಟಿಯ ಒರೆಗಲ್ಲು ಬಹಳ ತೀಕ್ಷ್ಣವಾದುದು. ಸಾಮಾನ್ಯ ಜನರಿಗೆ ಅವರ ಸತ್ಯಪಕ್ಷಪಾತದಲ್ಲಿ ಕೊಂಚ ವೈಚಿತ್ರ್ಯ ಕಂಡುಬರುತ್ತದೆ. ನಾವು ಫಲಾಪೇಕ್ಷಿಗಳು. ನಮ್ಮ ಕೆಲಸ ಹಣ್ಣಾದರೆ ಸಾಕು, ಯಾವ ದಾರಿಯಾದರೇನು ಎಂಬ ಮನೋವೃತ್ತಿ ನಮ್ಮದು. ಅವರಿಗೆ ಹಾಗಲ್ಲ. ಕೆಲಸ ಆಗಲಿ ಬಿಡಲಿ, ಹಿಡಿದ ಹಾದಿ ಸತ್ಯವಾಗಿರಬೇಕು. ಕಸ್ತೂರಿ ಬಾ ತನ್ನ ಕೆಲಸದಲ್ಲಿ ಅಶ್ರದ್ಧೆ ತೋರಿಸಿದಳೆಂದು ಅವರಿಗೆ ಅನಿಸಿತು. ತನ್ನ ಮಗ ಬೇನೆ ಬಿದ್ದಿದ್ದರೆ ಆಕೆಗೆ ತಿಳಿಯದೆ ಇರುತ್ತಿತ್ತೆ? ಆಕೆಗೆ ಇನ್ನೂ ಸಮದೃಷ್ಟಿ ಸಮನಿಸಿಲ್ಲ. ಆಕೆಗೆ ತನ್ನ ತಪ್ಪನ್ನು ತಿಳಿಸಿಕೊಡಬೇಕು ಎನಿಸಿತು ಗಾಂಧೀಜಿಗೆ. ಆ ದಿನ ಸಂಜೆಗೆ ಪ್ರಾರ್ಥನೆಯ ಹೊತ್ತಿನಲ್ಲಿ ಬಹಿರಂಗವಾಗಿ ಆ ಕೆಲಸ ಮಾಡಿದರು. 'ನಿನ್ನ ಮಗ ದೇವದಾಸ ಕಾಯಿಲೆ ಬಿದ್ದಿದ್ದರೆ ನಿನಗೆ ಕೂಡಲೆ ಗೊತ್ತಾಗುತ್ತಿತ್ತು; ಉಳಿದವರು ಕಾಯಿಲೆ ಬಿದ್ದರೆ ನಿನಗೆ ಸುದ್ದಿ ಕೂಡಾ ಗೊತ್ತಾಗಬಾರದೆಂದರೆ ಏನು?'

ತಾವು ಆಕೆಯನ್ನು ಪೀಡಿಸಿದ ಹಾಗೆ ಈಗ ಆಕೆ ತಮ್ಮನ್ನು ಪೀಡಿಸಿದರೆ ಏನೂ ತಪ್ಪಲ್ಲ; ತಮಗೆ ಆ ಶಿಕ್ಷೆ ಸಮ್ಮತ ಎನ್ನುತ್ತಾರೆ ಬಾಪೂ. 'ಆದರೆ ಇಬ್ಬರೂ ಪಳಗಿದ ಗೆಳೆಯರು. ಇಬ್ಬರಿಗೂ ಕಾಮಭಾವನೆ ಇಲ್ಲ. ಕಸ್ತೂರಬಾ ಅಂತೂ ಅನಾಸಕ್ತಳಾಗಿ ಕಾಯಿಲೆಗಳಲ್ಲಿ'–ಗಾಂಧೀಜಿಗೆ ಕಾಯಿಲೆ ಆದಾಗ–'ತುಂಬಾ ಶ್ರದ್ಧೆಯಿಂದ ಆರೈಕೆ ಮಾಡಿದಾಳೆ. ದಾಂಪತ್ಯದಲ್ಲಿ ಸಮಾಧಾನ ಶಾಂತಿ, ಸಂತೋಷಗಳು ಬಳೆದಿವೆ.'

ಗಾಂಧೀಜೀ ಆಕೆಯನ್ನು ಗೌರವಿಸಿದ ಹಾಗೆ ಯಾರೂ ತಮ್ಮ ಹೆಂಡತಿಯನ್ನು ಮನ್ನಿಸಿರಲಾರರು. ಆಕೆ ತಮ್ಮ ಗುರು ಎಂದರು. ಅಹಿಂಸೆಯನ್ನು ತಮಗೆ ಕಲಿಸಿದ್ದು ಆಕೆಯ ಮೂಕ ತಪಸ್ಸು ಎಂದು ಸಾರಿ ಹೇಳಿದರು.

ಆಕೆಯ ತಪಸ್ಸು ಹಿಂದಿನ ಯಾವ ಹೆಸರಾದ ಪತಿವ್ರತೆಯ ತಪಸ್ಸಿಗೂ ಕಡಮೆಯಾಗಲಿಲ್ಲ. ಗಂಡನ ಜೊತೆಯಲ್ಲಿ ಹೆಜ್ಜೆಗೆ ಸರಿಯಾಗಿ ಹೆಜ್ಜೆ ಹಾಕುತ್ತ ಧರ್ಮದ ಹಾದಿಯಲ್ಲಿ ಸಹ ಧರ್ಮಚಾರಿಣಿಯಂತೆ ನಡೆದಿದಾಳೆ. ದಾರಿಯಲ್ಲಿ ಕಾಲು ನೋವಾಗಿರಬಹುದು. ಗಂಡನ ಗಾಳಿಗಾಲಿಗೆ ಸರಿ

ಯಾಗಿ ಓಡಲಾರದೆ ನಿಂತು ನಿಂತು ಹಾದಿ ನಡೆದಿದ್ದಾಳು. ನಡೆವಾಗ ನೋವಿನಿಂದ ಬೇಸತ್ತು ಕಣ್ಣೀರ ಹೊಳೆ ಹರಿಸಿದ್ದಾಳು. ಆದರೆ ಹಿಡಿದ ಕೈ ಬಿಡದೆ ಗಾಂಧೀಜಿಯನ್ನು ಅನುಸರಿಸಿ ಬಂದಿದಾಳೆ. ಹೆಂಗಸಿಗೆ ಮನೆಯೆಂದರೆ ತುಂಬಾ ಪ್ರೀತಿ, ಆಕೆ ಮನೆಯ ಒಡತಿ; ಗೃಹಣಿಯೆಂದು ಹೆಸರಲ್ಲವೆ? ಗಾಂಧೀಜೀ ತಮ್ಮ ಮನೆಯನ್ನೇ ಮುರಿದರು; ಮುರಿದು ಆಶ್ರಮ ಮಾಡಿದರು. ಬ್ರಹ್ಮಚರ್ಯದ ವ್ರತತೊಟ್ಟು ತಮ್ಮ ಪತಿಪತ್ನೀಸಂಬಂಧವನ್ನೇ ಅಳಿಸಿದರು. ಹಾಗೆ ಮಾಡುವಾಗ ಕಸ್ತೂರಿಬಾನನ್ನು ಕೇಳಲೇ ಇಲ್ಲ. ರಾಮನೊಡನೆ ವನವಾಸಕ್ಕೆ ಹೋಗಬೇಕಾದರೆ ಲಕ್ಷ್ಮಣನು ಊರ್ಮಿಳೆಯನ್ನು ಕೇಳಿದನೆ, ಆಕೆಗೆ ಹೇಳಿದನೆ? ತಮ್ಮ ಸತ್ಯಶೋಧನೆಗೆ ಬ್ರಹ್ಮಚರ್ಯ ಅಗತ್ಯವೆಂದು ಹೊಳೆದ ಕೂಡಲೆ ಆ ನಿಯಮವನ್ನು ಹಿಡಿದರು. ಅಸ್ಪೃಶ್ಯತೆಯ ಮಾತೂ ಅಷ್ಟೆ. ತಮ್ಮ ಸತ್ಯಾಗ್ರಹ ಯುದ್ಧದಲ್ಲಿ ಕಸ್ತೂರಿಬಾ ಕೂಡ ಸೆರೆಮನೆಗೆ ಹೋಗಬೇಕು ಎನಿಸಿತು. ಕಸ್ತೂರಿ ಬಾ ಇದು ಯಾವುದರಲ್ಲೂ ಹಿಂಜರಿದಿಲ್ಲ. ಧೀರೆಯಂತೆ ಎಲ್ಲವನ್ನೂ ಸಾಧಿಸಿದಾಳೆ. ತನ್ನ ಸಾಮಾನ್ಯ ಜೀವನವನ್ನು ವೈರಾಗ್ಯದಿಂದ ಹದಗೊಳಿಸಿ ಸತ್ಯದಿಂದ ಹೊಸದಾಗಿ ಭವ್ಯವಾಗಿ ಕಟ್ಟಿಕೊಂಡಿದಾಳೆ. ಹಿಂದಿನ ಸೀತೆ ಚಂದ್ರಮತಿಯರಿಗಿಂತ ಇಂದಿನ ಈ ತಪಸ್ವಿನಿ ಯಾವುದರಲ್ಲಿ ಕಡಿಮೆ?

ಕಸ್ತೂರಿ ಬಾ ಅವರಿಗಿಂತ ಒಂದು ತೂಕ ಹೆಚ್ಚೆಂದರೆ ತಪ್ಪಾಗಲಾರದು. ಹೇಗೆಂದರೆ ಸೀತಾ ಚಂದ್ರಮತಿಯರ ಯೋಗ್ಯತೆಗೆ ಎಳ್ಳಷ್ಟೂ ಕುಂದಕವಾಗುವದಿಲ್ಲ. ಅವರಿಗೆ ಒದಗಿದ ಪರೀಕ್ಷೆಗಿಂತ ಈಕೆಯ ಪಾಲಿಗೆ ಬಂದುದು ಹೆಚ್ಚು ವಿಷಮವಾದದು, ಹೆಚ್ಚು ಕಠಿನವಾದುದು ಎಂದು ಅದರ ಭಾವ. ಶ್ರೀರಾಮ ಹರಿಶ್ಚಂದ್ರರಿಗೆ ತಮ್ಮ ಸತ್ಯಮಾರ್ಗದಲ್ಲಿ ನಡೆವಾಗ ತಮ್ಮ ದಾಂಪತ್ಯಜೀವನವನ್ನು ತಲೆಕೆಳಗು ಮಾಡಬೇಕಾದ ಅವಶ್ಯಕತೆ ಇರಲಿಲ್ಲ. ನಡುವೆ ಒದಗಿಬಂದ ಕುತ್ತು ಕಳೆದಮೇಲೆ ಮತ್ತೆ ಅವರ ಬಾಳು ಮೊದಲಿನ ನೆಲೆಗೇ ಬಂದು ನಿಂತಿತು. ಗಾಂಧೀಜಿಯದು ಹಾಗಲ್ಲ; ಇವರ ಸತ್ಯಮಾರ್ಗದಲ್ಲಿ ಮೊದಲಿನ ತಳವನ್ನು ಪೂರಾ ಕಿತ್ತಬೇಕಾಯಿತು. ಬುದ್ಧದೇವನಂತೆ ತಮ್ಮ ಮೊದಲಿನ ಬಾಳನ್ನು ಗಾಂಧೀಜೀ ತ್ಯಜಿಸಿ ಬಿಟ್ಟರು. ಜಗದ್ಧಿತದ ಹಾದಿ ಹಿಡಿದರು. ಈ ಗುರಿಯನ್ನು ಬೆನ್ನು ಹತ್ತಿ ನಡೆದವರೆಲ್ಲ ತಪ್ಪದೆ

ಸನ್ಯಾಸಿಗಳಾಗಿದ್ದಾರೆ. ಬುದ್ಧ ಭಗವಾನನು ಹರೆಯದ ಹೆಂಡತಿಯನ್ನು ಆಕೆಯ ತಪ್ಪು ಏನೂ ಇಲ್ಲದೆಯೆ, ಆಕೆಗೆ ಹೇಳದೆ ಕೇಳದೆ ನಡುರಾತ್ರಿಯಲ್ಲಿ ಬಿಟ್ಟುಹೋದ. ರಾಮಾನುಜಾಚಾರ್ಯರು ತಿಳಿಯದೆ ಮಾಡಿದ ಸಣ್ಣ ತಪ್ಪಿಗಾಗಿ ಹೆಂಡತಿಯನ್ನು ಬಿಟ್ಟು ಸನ್ಯಾಸಿಯಾದರು. ದಾಸರು ಭಕ್ತರು ಎಲ್ಲರೂ ಅಷ್ಟೆ. ಗಾಂಧೀಜೀ ಸಂನ್ಯಾಸಿಯಾಗಿದ್ದೂ ದಾಂಪತ್ಯಜೀವನವನ್ನು ನಡೆಸಿದಾರೆ. ಬುದ್ಧದೇವನ ವೈರಾಗ್ಯದಾಹ ಇವರಿಗೆ ಇಲ್ಲದೆ ಇಲ್ಲ. ಆಚಾರ್ಯರ ಪತ್ನಿ ಮಾಡಿದಂಥ ಮಹಾಪರಾಧಗಳನ್ನು ಕಸ್ತೂರಿಬಾ ಮಾಡದೆ ಇಲ್ಲ. ದಾಸರಿಗೆ ಇದ್ದ ದೇವರ ದರ್ಶನದ ಹಂಬಲ ಇವರಿಗೂ ಇದೆ. ಆದರೆ ಇವರ ಹೆಂಡತಿ ಉಳಿದ ಕಡೆ ನಡೆದಂತೆ ಇವರಿಗೆ 'ದಂಡಿಗೆ ಬೆತ್ತ ಹಿಡಿಸಿದ' ಳಿಲ್ಲ. ಕಸ್ತೂರಿ ಬಾ ಕೊಂಚ ಎಚ್ಚರ ತಪ್ಪಿದರೆ ಹಕ್ಕಿ ಹಾರಿಹೋಗಬಹುದಾಗಿತ್ತು. ಆಕೆ ಆ ತೂಕ ಕಾಯ್ದುಕೊಂಡಳು. ಹಕ್ಕಿ ಗೂಡು ಬಿಟ್ಟು ಹಾರಿತು. ಆದರೆ ಜೊತೆ ಬಿಟ್ಟು ಹೋಗಲಿಲ್ಲ. ಗಾಂಧೀಜಿಯದು ಎಷ್ಟೋ ದೊಡ್ಡ ಜೀವವಾದರೂ ಕಸ್ತೂರಿಬಾನ ತಪಸ್ಸು ಇರದಿದ್ದರೆ ಈ ಸೊಬಗಿನ ಪವಾಡ ನಡೆಯುತ್ತಿತ್ತೋ ಇಲ್ಲವೋ !

ಈ ಮಾತು ಚೆನ್ನಾಗಿ ಅರ್ಥವಾಗಲು ಒಂದು ಸಂಗತಿ ಹೇಳಬಹುದು. ಗಾಂಧೀಜೀ ೧೯೩೦ ರಲ್ಲಿ ಎರವಡಾ ಸೆರೆಮನೆಯಲ್ಲಿದ್ದರು. ಕಸ್ತೂರಿಬಾ ಸತ್ಯಾಗ್ರಹವನ್ನು ಪ್ರಚಾರಮಾಡುತ್ತಾ ನಾಡಿನ ನಾಲ್ಕೂ ಮೂಲೆಗಳನ್ನು ಸುತ್ತುತ್ತಿದ್ದಳು. ಆಕೆಯ ಆರೋಗ್ಯವೂ ಸರಿಯಾಗಿರಲಿಲ್ಲ. ಆಕೆಗೆ ತನ್ನ ಸೀರೆಗಾಗಿ ನೂಲು ನೂತುಕೊಳ್ಳಲು ಸಾಕಷ್ಟು ವೇಳೆ ಸಿಗುತ್ತಿರಲಿಲ್ಲ. ಗಾಂಧೀಜೀ ಇದನ್ನು ಊಹಿಸಿಕೊಂಡರು. ಆಕೆಗಾಗಿ ತಾವು ನೂತು ಆ ದಾರವನ್ನು ಕಳಿಸಿದರು ಸೀರೆ ಮಾಡಿಸಿಕೊಳ್ಳೆಂದು. ಸೆರೆಮನೆಯ ಅಧಿಕಾರಿಗಳು ಈ ಒಲವಿನ ಕಾಣಿಕೆಯನ್ನು ಕಸ್ತೂರಿಭಾಗೆ ಕಳಿಸಲು ಒಪ್ಪಲಿಲ್ಲ. ಗಾಂಧೀಜೀ ಬಹಳ ಹೇಳಿದರು. ಈ ನೂಲನ್ನು ಯಾವ ಸಭೆಗೂ ಒಯ್ಯುವುದಿಲ್ಲ, ಇದರಿಂದ ಯಾವ ವಿಧವಾದ ರಾಜಕೀಯ ಲಾಭವನ್ನೂ ಹೊಂದುವುದಿಲ್ಲ, ಕಸ್ತೂರಿಬಾಗೆ ಸೀರೆ ಮಾಡಿಸಿಕೊಡುವ ಸುದ್ದಿಕೂಡಾ ಯಾರಿಗೂ ತಿಳಿಯದಂತೆ ನೋಡಿಕೊಳ್ಳುತ್ತೇವೆ ಎಂತ.

ಆದರೂ ನೂಲು ಆಕೆಗೆ ಮುಟ್ಟಲಿಲ್ಲ.

ಸಾಧಾರಣವಾಗಿ ಕಸ್ತೂರಿಬಾ ವಿಷಯವಾಗಿ ಗಾಂಧೀಜೀ ಮಾತಾಡುವುದಿಲ್ಲ. ಎಲ್ಲಿಯಾದರೂ ಒಂದು ಸಲ ಆ ತುಂಬು ಪ್ರೀತಿ ತುಳುಕುತ್ತದೆ. ಅದು ಹಾಗೆ ಚಿಮ್ಮಿದಾಗ ಎಷ್ಟು ಸೊಬಗು! ಉಪ್ಪಿನ ಸತ್ಯಾಗ್ರಹದಲ್ಲಿ ಗಾಂಧೀಜೀ ಸೆರೆಯಾದಾಗ ಕಸ್ತೂರಿಬಾ ಹತ್ತರ ಇರಲಿಲ್ಲ. ದೇಶಾಟನದಲ್ಲಿ ಇದ್ದರು. ಜೈಲಿಗೆ ಹೋಗುವಾಗ ಯಾರೋ ಗಾಂಧೀಜಿಯನ್ನು ಕೇಳಿದರು: ಕಸ್ತೂರಿಬಾಗೆ ಏನು ಹೇಳಬೇಕು? ಅವರು ನಗುತ್ತ ಹೇಳಿದರು. 'ಆಕೆಗೇನು ಹೇಳುವುದು? ಆಕೆ ಧೀರಸತಿ.'

ರಾಮಕೃಷ್ಣ ಪರಮಹಂಸರು ಸನ್ಯಾಸದಲ್ಲಿ ಔದಾರ್ಯ ಬೆರೆಸಿ, ಶಾರದಾ ಮಣಿದೇವಿಗೆ ತಮ್ಮ ಸಾನ್ನಿಧ್ಯದಲ್ಲಿ ತಾವು ಕೊಟ್ಟು ಅಲ್ಲಿಯತನಕ ಜಗತ್ತು ನೋಡದ ಕೇಳದ ಒಂದು ಸೊಬಗನ್ನು ತೋರಿದರು. ಗಾಂಧೀಜೀ–ಕಸ್ತೂರಿಬಾ ದಂಪತಿಗಳು ದಾಂಪತ್ಯವನ್ನು ಕಾಮದ ಕೆಸರಿನಿಂದ ಎತ್ತಿ ವೈರಾಗ್ಯದ ತಳಹದಿಯ ಮೇಲೆ ನಿಲ್ಲಿಸಿ ನಿಜವಾದ ಧರ್ಮ ಪ್ರೇಮಗಳಿಂದ ಕಟ್ಟಿ ಹಿಂದೆಂದೂ ಕಾಣದ ಹೊಸ ಸೊಬಗನ್ನು ಬೀರುತ್ತಿದಾರೆ.

ಸಾವಿನ ಶೀತಲಸ್ಪರ್ಶ ಕೆಲವರ ನೆನಪು ಕೂಡಾ ಉಳಿಯದಂತೆ ನಾಶ ಮಾಡಿದರೆ, ಮತ್ತೆ ಕೆಲವರಿಗೆ ಆ ಶೀತಲ ಸ್ಪರ್ಶವೇ, ಅಮೃತ ಹಸ್ತವಾಗಿ ಅಮರರಾಗುತ್ತಾರೆ. ಹೀಗೆ ಅಮರರಾಗುವ ಜನ ತೀರಾ ಅಪೂರ್ವ. ಅಂಥ ಅಪೂರ್ವ ಅಮರರ ಮಣಿಮಾಲೆಯಲ್ಲಿ ಬಾ ಜೀವರತ್ನ. ಫೆಬ್ರವರಿ ೨೨ ನೇ ತಾರೀಖು ಸಂಜೆ ಆಗಾಖಾನರ ಅರಮನೆಯ ಸೆರೆಮನೆಯಲ್ಲಿ, ಪತಿಸಾನ್ನಿಧ್ಯದಲ್ಲಿ ಕಸ್ತೂರಿಬಾ ಹೃದ್ರೋಗದಿಂದ ನಶ್ವರದೇಹ ತ್ಯಜಿಸಿ ಸುಮಂಗಲಿಯಾಗಿ ಅಮರರಾದರು. ಆ ಸಾವು ಸಾವಲ್ಲ; ಬದುಕಿಗಿಂತ ಉಜ್ವಲಬದುಕು.

ಹಿಮಾಚಲದಂತೆ ದಿಗಂತವನ್ನೆಲ್ಲಾ ಹಬ್ಬಿ ನಿಂತ ಗಾಂಧೀಜಿಯ ಅದ್ಭುತ ವ್ಯಕ್ತಿತ್ವದ ಇದಿರು, ಹಿನ್ನೆಲೆಯಲ್ಲಿ, ಕರಗಿ ನಿಂತ ಕಸ್ತೂರಿಬಾನ ವ್ಯಕ್ತಿತ್ವ ಬಹು ಜನಕ್ಕೆ ಪರಿಚಯವಿಲ್ಲ. ಎಲೆಯ ಮರೆಯ ಹೂವಿನಬಾಳು ಅವರದು. ಗಿಡದ ಬಳಿ ಹೋದವರಿಗೆ ಸುಮದ ಸೌರಭದ ಅಮೃತಾನುಭವವಾದೀತಾಗಲಿ ಆ ಕುಸುಮ ಕಣ್ಣಿಗೆ ಕಾಣದು. ಹಾಗೇ ಬಾನ ಬಾಳು. ಗಾಂಧೀಜಿಯ ಬಾಳು ಬೀರಿದ ಪರಿಮಳ ಕಸ್ತೂರಿ ಬಾನಿಂದ ಬಂದದ್ದು

ಎಂಬದು ಗಾಂಧೀಜಿಯೆ ಬಾಯಿಬಿಟ್ಟು ಹೇಳದಿದ್ದರೆ ಗೊತ್ತೆ ಆಗುತ್ತಿರಲಿಲ್ಲ ಆದರೆ ಕಸ್ತೂರಿಯ ಪರಿಮಳವನ್ನು ಮುಚ್ಚಿಡಲು ಸಾಧ್ಯವೆ?

ದೇಶ ಸ್ವಾತಂತ್ರ್ಯ ಗಾಂಧೀಜಿಯ ಬಾಳಿನ ಗುರಿಯಾದಾಗಲೇ ಕಸ್ತೂರ. ಬಾ ಕೂಡಾ ಆ ಕಂಕಣ ತೊಟ್ಟರು. ಎರಡು ಮೂರು ಬಾರಿ ಕಾರಾಗೃಹವಾಸದ ಬಹುಮಾನ ಕೂಡಾ ದೊರಕಿದೆ. ಕಾರಾಗೃಹ ವಾಸವನ್ನು ಗಾಂಧೀಜೀ ಎಷ್ಟು ಆನಂದದಿಂದ ಅಪ್ಪಿದರೋ ಬಾ ಕೂಡಾ ಅಷ್ಟೇ ಹರ್ಷದಿಂದ ಸ್ವಾಗತಿಸಿದ್ದಾರೆ. ಅದರ ಫಲವಾಗಿ ಬಂದ ದುಃಖ ನೋವುಗಳನ್ನು ನೋವಲ್ಲವೆಂಬ ಬುದ್ಧಿಯಿಂದ ಅನುಭವಿಸಿದಾರೆ. ಒನ್ಮೆ ಬಾಪೂ ಸೆರೆಯಲ್ಲಿದ್ದಾಗ ಬಾ ಜ್ವರ ಬಂದು ಹಾಸಿಗೆ ಹಿಡಿದರು. ಜ್ವರ ಹೆಚ್ಚಾಗಿಯೇ ಇತ್ತು. ಆದರೆ ಬಾಪೂಗೆ ಈ ಸುದ್ದಿ ತಿಳಿಸಲೇಕೂಡದೆಂದು ಬಿಟ್ಟರು. ರಾಜಕೋಟಿ ಪ್ರಸಂಗದಲ್ಲಿ ಈ ಮುಪ್ಪಿನ ಮುದುಕಿ 'ನಾನು ರಾಜಕೋಟಿಯ ಕನ್ಯೆ ಅಲ್ಲಿನ ಸ್ಥಿತಿ ಗತಿ ಕೆಟ್ಟರೆ ಅದನ್ನು ನಾನು ಜೀವ ಕೊಟ್ಟಾದರೂ ಸರಿಪಡಿಸಬೇಕು.' ಎಂದು ಸತ್ಯಾಗ್ರಹದ ಸುಳಿಯಲ್ಲಿ ಧುಮುಕಿಬಿಟ್ಟರು. ಕಾರಾಗೃಹವಾಸ ಅನುಭವಿಸಿದರು.

ನಮ್ಮಲ್ಲಿ ಎಷ್ಟೋ ಜನಕ್ಕೆ ಸೆರೆಮನೆಗೆ ಹೋಗುವುದೇ ದೊಡ್ಡ ದೇಶ ಸೇವೆ ಮಾಡಿದಹಾಗೆ ಎಂಬ ಅಭಿಪ್ರಾಯವಿದೆ. ಎಲ್ಲಕ್ಕಿಂತ ಮೊದಲು ಸೆರೆ ಸೇರೋಣ ಎಂಬುದು ಹೇಡಿತನದ ಮನೋಭಾವ. ರಣರಂಗದಲ್ಲಿ ಜೀವದ ಪಣ ತೊಟ್ಟು ಕಾದಬೇಕು. ಹೋಗಲೇಬೇಕಾಗಿ ಬಂದರೆ ಸೆರೆಗೆ ಹೋಗಬೇಕು. ೯೪೨ ಆಗಸ್ಟರ ರಾತ್ರಿ ಗಾಂಧೀಜಿಯನ್ನು ದಸ್ತಗಿರಿ ಮಾಡಲುಬಂದ ಪೋಲೀಸ್ ಸೂಪರಿಂಟೆಂಡೆಂಟ್ ಬಾ ಗೆ 'ನಿಮಗೇನೂ ವಾರಂಟು ಇಲ್ಲ, ಆದರೆ ಗಾಂಧೀಜಿಯ ಜೊತೆಗೆ ಇರ ಬಯಸುವುದಾದರೆ ನಿಮ್ಮನ್ನೂ ಕರೆದೊಯ್ಯಬಹುದೆಂದು ಅಪ್ಪಣೆ ಆಗಿದೆ' ಎಂದು ಹೇಳಿದರು. ಆದರೆ ಬಾ ಸ್ಪಷ್ಟವಾಗಿ ಹೇಳಿದರು: 'ಇನ್ನೂ ನಾ ಮಾಡಬೇಕಾದ ಕೆಲಸವಿದೆ. ಮುಗಿಸಿ ಬರುತ್ತೇನೆ' ಎಂತ. ಮರು ದಿನ ಬೋರೀಬಂದರಿನಲ್ಲಿ ಭಾಷಣ ಮಾಡುವಾಗ ದಸ್ತಗಿರಿಯಾಯಿತು. ನಗು ನಗುತ್ತಾ ಸೆರೆಗೆ ಹೋದರು.

ಈ ಕರ್ತವ್ಯಬುದ್ಧಿ, ನಿಷ್ಠೆ ಸತ್ಯಾಗ್ರಹದಲ್ಲಷ್ಟೇ ಅಲ್ಲ; ಬಾಳಿನ ಎಲ್ಲ ವಿಷಯದಲ್ಲೂ. ಬಾ ಯಾವಾಗಲೂ ಕರ್ತವ್ಯಕ್ಕೇ ಅಗ್ರಸ್ಥಾನ ಕೊಟ್ಟಿದ್ದಾರೆ; ಮೋಹ ಮಮತೆಯ ಮಾತು ಆಮೇಲೆ. ಚಂದ್ರಮತಿ ಮಗನನ್ನು

ಮಾರಲು ಸಮ್ಮತಿಸಿದಳು. ಮಗನ ತಲೆಯನ್ನೇ ಕೊಡಲು ಮುಂದೆ ಬಂದ ದೃಷ್ಟಾಂತ ತೀರಾ ಕಡಮೆ. ಹಿಂದೆ ಕಾಣದ ಈ ಕರ್ತವ್ಯಬುದ್ಧಿಯ ಪವಾಡವನ್ನು ಕಸ್ತೂರಿ ಬಾ ಮೆರೆದು ತೋರಿದಾರೆ. ೧೯೪೬ ರಲ್ಲಿ ಬೊಂಬಾಯಲ್ಲಿ ಹಿಂದೆಂದೂ ಆಗದಷ್ಟು ಅದ್ಭುತ ಪ್ರಮಾಣದ ಹಿಂದೂ ಮುಸ್ಲಿಂ ದೊಂಬಿಯಾಗಿ ಬೊಂಬಾಯಿನ ರಸ್ತೆಗಳು ನೆತ್ತರ ಕಲೆಗಟ್ಟಿ ಹೋದವು. ತಲೆಗಳು ತರಗೆಲೆಗಳಂತೆ ಹಾರಿದವು. ಕುರುಡು ದ್ವೇಷದ ವಿಷದ ಹೊಳೆಯಲ್ಲಿ. ಮಮತೆ ಮಾನವತೆಗಳು ಕೊಚ್ಚಿ ಹೋದ ಕಾಲ. ಅಲ್ಲಿದ್ದವರೆಲ್ಲಾ ಹೆದರಿ ಜೀವದಾಸೆಯಿಂದ ಊರು ಬಿಟ್ಟು ಬೇರೆ ಊರು ಸೇರುತ್ತಿದ್ದರು. ಮತದ ಹೆಸರಿನಲ್ಲಾಗುತ್ತಿದ್ದ ಈ ರಕ್ತಪಾತ, ಜೀವನಷ್ಟ, ಮೊದಲೇ ಅಹಿಂಸಾವಾದಿಯಾದ ಗಾಂಧೀಜಿಯ ಎದೆಯನ್ನು ತುಂಬಾ ಆಳವಾಗಿ ಕಲಕಿದವು. ದೇವದಾಸ ಗಾಂಧಿಯನ್ನು ತಂತಿಕೊಟ್ಟು ಕರೆಸಿಕೊಂಡು 'ಹೋಗು, ಹಿಂದೂ ಮುಸ್ಲಿಮರು ಎಲ್ಲಿ ಹೊಡೆದಾಡುತ್ತಿದ್ದರೆ ಅಲ್ಲಿ ಈ ದ್ವೇಷ ಬೇಡ ಎಂದು ಅವರನ್ನು ತಡೆ, ಅವರು ನಿನ್ನ ಮಾತು ಕೇಳಿ ಈ ದ್ವೇಷ ಬಿಟ್ಟರೂ ಸರಿಯೆ. ಅಥವಾ ನಿನ್ನನ್ನು ಅವರಲ್ಲಿ ಯಾರು ಕೊಂದರೂ ಸರಿಯೆ. ಇದಕ್ಕಾಗಿ ನನ್ನ ಮಗನನ್ನು ಬಲಿಕೊಟ್ಟ ತೃಪ್ತಿ, ಸಂತೋಷ ನನಗಾಗುತ್ತದೆ' ಎಂದರು. ಅಭಿಮನ್ಯು ಚಕ್ರವ್ಯೂಹದೊಳಗೆ ನುಗ್ಗುತ್ತೇನೆ ಎಂದಾಗ ಧರ್ಮರಾಜನಂಥ ಸ್ಥಿತಪ್ರಜ್ಞ ಕೂಡಾ ಹಿಂದು ಮುಂದು ಯೋಚಿಸಿದ. ಗಾಂಧೀಜೀ ಯೋಚಿಸುವುದಿರಲಿ, ತಾವೇ ಕರೆಸಿ ಮೃತ್ಯುವಿನ ತಾಂಡವರಂಗಕ್ಕೆ ಹೋಗು ಎಂದರು. ಈ ಸಂದರ್ಭದಲ್ಲಿ ಕಸ್ತೂರಿ ಬಾ ತೋರಿಸಿದ ಧೈರ್ಯ, ತ್ಯಾಗಾಸಕ್ತಿ ಸಾಟಿಯಿಲ್ಲದ್ದು. ಮಗನಿಗೆ ಬೊಂಬಾಯಲ್ಲಿ ನಿಶ್ಚಿತ ಸಾವು ಕಾದಿತ್ತು. ಆದರೇನು ಬಾ ಅಳುಕಿದರೆ? 'ಹೋಗು, ಕೀರ್ತಿಶಾಲಿಯಾಗು' ಎಂದು ಹರಸಿ ಕಳಿಸಿದರು. ಸುಧನ್ವನ ತಾಯಿ ಕೃಷ್ಣನ ಇದಿರು ಹೋಗಲು ಹೊರಟ ಮಗನಿಗೆ 'ಶ್ರೀಕೃಷ್ಣನಿಗೆ ವಿರುದ್ಧವಾಗಿ ಸೆಣಸಿ ನಿಂತು ಬದುಕಿದವರಾರು? ಹೋಗು. ನಿನಗೆ ಸಾವು ಸಿದ್ಧ. ಆದರೆ ಕೃಷ್ಣನೂ ಮೆಚ್ಚುವ ಹಾಗೆ ಕದನವಾಡಿ ಸಾಯಿ" ಎಂದಳಂತೆ. ದೇವದಾಸನಿಗೆ ಆಶೀರ್ವಾದ ಮಾಡುವಾಗ ಬಾನ ಎದೆಯೂ ಇದೇ ಹರಕೆಯನ್ನೇ ಪಲುಕುತ್ತಿದ್ದಿರಬೇಕು.

೬೧ ವರುಷಗಳಿಂದ ಪಳಗಿಸಿಕೊಂಡ ಜೀವದ ಜೊತೆಗಾತಿ, ಗಾಂಧೀಜಿಗೆ ಇನ್ನಿಲ್ಲ. ಇದರ ಪರಿಣಾಮ ಅವರ ಹೃದಯದ ಮೇಲೆ ಹೇಗೋ

ಏನೋ? ಒಂದೊಂದಾಗಿ ಸಂಸಾರ ಬಂಧನಗಳನ್ನು ಕಿತ್ತೊಗೆಯುತ್ತಿರುವ ವಿರಕ್ತ ಗಾಂಧೀಜೀ, ಬಿತ್ತಲೆ ಬೈರಾಗಿ, ಇದೂ ಒಂದು, ಇದ್ದ ಒಂದೇ ಒಂದು ಬಂಧನವೂ ಹೋಯಿತೆಂದು ಹಿಗ್ಗಬಹುದು. ಮತ್ತೆ ಆಶ್ರಮ ಕಟ್ಟುತ್ತಾರೋ ಇಲ್ಲವೇ ಊರೂರು ಅಲೆಯುತ್ತಾ ಅನಿಕೇತನರಾಗೇ ಇದ್ದಾರೋ?

ಬೈರಾಗಿ ಜೀವನದ ಶಿಲೆಯೊಳಗೆ ಅಡಗಿರುವ ಅಮೃತ ಚಿಲುಮೆ ಯಂಥ ರಸಹೃದಯವುಳ್ಳ ಗಾಂಧೀಜೀ ಎಷ್ಟು ಪರಿತಪಿಸುತ್ತಿದಾರೋ! ಮಗನಲಾಲ ಗಾಂಧೀ ಸತ್ತಾಗ 'ವಿಧವೆಯಾದದ್ದು ಅವನ ಪತ್ನಿಯಲ್ಲ, ನಾನು' ಎಂದು ಕೊರಗುವಷ್ಟು ಕೋಮಲಹೃದಯ ಅವರದು. ಮಹಾದೇವ ಭಾಯಿ ಹೋದಾಗ, ಸ್ಥಿತಪ್ರಜ್ಞರಾದರೂ ಮೈಮರೆತು, 'ಮಹಾದೇವ್ ಮಹಾದೇವ್' ಎಂದು ಶವವನ್ನೇ ಕರೆದ ಮೃದು ಅಂತಃಕರಣ. ಆಗ ಪಕ್ಕದಲ್ಲಿದ್ದ ಬಾ 'ಭಾಯಿ! ಬಾಪೂ ಕರೆಯುತ್ತಿದಾರೆ. ಓ ಕೊಡು ಮಹಾದೇವ್' ಎಂದರಂತೆ. ಪತಿಯು ಕರೆಗೆ ಶವವೂ ಉತ್ತರ ಕೊಟ್ಟೀತು ಎಂಬಷ್ಟು ನಂಬಿ ಕೆಯೇನೋ ಬಾಗೆ! ಬಾ ಹೋದಾಗಲೂ ಬಾಪೂ ಹೀಗೇ ಕರೆದಿರಬಹುದು. ಆದರೆ ಬಾನಂತೆ ಅವರ ಹೃದಯಕ್ಕೆ ಸಮಾಧಾನದ ಸಂಜೀವನವನ್ನೆರೆಯ ಬಲ್ಲ ವರು ಯಾರಿದಾರೆ ಆಗಾಖಾನರ ಸೆರಮನೆಯಲ್ಲಿನ್ನು!

ಅವರ ಮರಣದಿಂದ ದೇಶಕ್ಕೆ ತುಂಬಾ ದೊಡ್ಡ ನಷ್ಟ. ಗಾಂಧೀಜೀ ಪಳ ಗಿಸಿದ ನಿಪುಣ ಸೈನಿಕರಲ್ಲಿ ಒಬ್ಬೊಬ್ಬರಾಗಿ ಕೈ ಬಿಟ್ಟು ಹೋಗುತ್ತಿದಾರೆ. ಅವರಲ್ಲಿ ಬಾ ಕೂಡಾ ಒಬ್ಬರು. ಅಂಥ ಆದರ್ಶ ಮಾತೆ, ಸತಿ, ಗೃಹಿಣಿ, ದೇಶಸೇವಿಕೆ, ಹೆಣ್ಣು ಇನ್ನೆಲ್ಲಿ? ಅವರ ಆ ಸ್ಥಾನ ಚಿರಶೂನ್ಯ ಸಿಂಹಾಸನ.

ನಿರಕ್ಷರ ಕುಕ್ಷಿಯಾದರೂ, ಆತ್ಮ ಸಂಸ್ಕಾರ ಬಲದಿಂದ ದಿವ್ಯ ಆದರ್ಶ ವೊಂದನ್ನು ಮೆರೆದ ಬಾ, ಪಾರ್ಥಿವ ದೇಹ ಹೋದರೂ ಚಿರಂಜೀವಿ. ಅಂಥ ಆತ್ಮಕ್ಕೆ ಮರಣ ಉಂಟೆ? ಅವರ ಆತ್ಮ ಸ್ಫೂರ್ತಿಯ ಮಿಂಚಾಗಿ ನಮ್ಮೆಲ್ಲ ರಲ್ಲೂ ಸಂಚರಿಸಿ, ತಾನು ಬಯಸಿದ ಕಾರ್ಯವನ್ನು, ಭಾರತ ಸ್ವಾತಂತ್ರ್ಯವನ್ನು ನಮ್ಮ ಮೂಲಕ ಸಾಧಿಸಿಕೊಳ್ಳುತ್ತದೆ. ಇದು ತ್ರಿಕಾಲಾಬಾಧಿತಸತ್ಯ.

---

# ಕೊನೆಯ ದಿನ

ನನ್ನ ಜೊತೆಯಲ್ಲಿ ಈ ಹೊತ್ತು ದುಃಖಸಾಗರದಲ್ಲಿ ಮುಳುಗಿರುವವರಿಗೆ, ನಮ್ಮ ತಾಯ ಬಾಳಿನ ಕಡೆಯ ಕೆಲ ಗಳಿಗೆಗಳ ವಿಚಾರ ತಿಳಿಸುವುದು ಅನುಚಿತವಾಗದು. ನನ್ನ ಹೃದಯವಿನ್ನೂ ಕರ್ಕಶವಾಗೇ ಇದೇ , ದೇವರಮೇಲಿನ ನಂಬಿಕೆ ಕೂಡಾ ತೊಲಗಿಹೋಗಿದೆ ನನಗೆ. ಇದ್ದಕ್ಕಿದ್ದ ಹಾಗೇ ತಾಯಿಲ್ಲದ ತಬ್ಬಲಿಯಾದದ್ದೇ ನನ್ನ ಈಗಿನ ಮನೋಸ್ಥಿತಿಗೆ ಕಾರಣವಿರಬೇಕು. ಈ ಸ್ಥಿತಿಯನ್ನು ಬೇಗ ಮೀರಿ ಹೊರಬರಬೇಕೆಂದು ಆಶಿಸುತ್ತಿದೇನೆ.

ಕಡೆಯ ಗಳಿಗೆಯವರೆಗೂ ನಮ್ಮಮ್ಮನಿಗೆ ಜ್ಞಾನ ಪೂರಾ ತಪ್ಪಲಿಲ್ಲ : ಜ್ಞಾಪಕ ಶಕ್ತಿ ಹೋಗಲಿಲ್ಲ. ಫೆ. ೨೦ ರ ದಿನ ಸರಕಾರವೆ ಆಕೆಯ ಸ್ಥಿತಿ ಆಶಾದಾಯಕವಾಗಿಲ್ಲವೆಂದಾಗ ಕೂಡಾ ಆಕೆ ತಾನು ಬದುಕುತ್ತೇನೆ, ಈ ಗಂಡವನ್ನು ಗೆಲ್ಲುತ್ತೇನೆ ಎಂಬ ಆಶೆ ಇಟ್ಟುಕೊಂಡಿದ್ದಳು.

ಕೆಲ ದಿನದಿಂದ ಹೃದಯ ಚಲನೆ ನಿಧಾನವಾದ್ದರಿಂದ ಮೂತ್ರ ಕೋಶ ಕೆಲಸ ಮಾಡುವುದನ್ನೇ ನಿಲ್ಲಿಸಿಬಿಟ್ಟಿತ್ತು. ಇದರ ಜೊತೆಗೆ ಶ್ವಾಸಕೋಶದ ಮೇಲು ಭಾಗ ಕೆಟ್ಟುಹೋಗಿತ್ತು. ಆದರೆ ಜ್ವರ ಮಾತ್ರ ಬರಲಿಲ್ಲ. ರಕ್ತದ ಒತ್ತಡ, ನಾಡಿಯ ಮಿಡಿತ ೭೫–೫೨ ರ ವರೆಗೂ ತಗ್ಗಿಹೋಗಿತ್ತು. ಇನ್ನು ಆಶೆಯಿಲ್ಲ ಎಂದರು ವೈದ್ಯರು.

ಸೋಮವಾರ ಸಾಯಂಕಾಲ ನಾನು ಆಗಾಖಾನ್ ಅರಮನೆ ಸೇರುವ ಹೊತ್ತಿಗೆ ಆಕೆ ತುಂಬಾ ಯಾತನೆ ಅನುಭವಿಸುತ್ತಿದ್ದಳು. ತನ್ನ ಜೊತೆಯಲ್ಲಿ ಸಂಬಂಧದಲ್ಲಿದ್ದವರು ಪ್ರೇಮದಿಂದ ಮಾಡುತ್ತಿದ್ದ ಉಪಚಾರವೊಂದೇ ಆಕೆಗೆ ಆ ನೋವಿನಲ್ಲಿ ಬಾಹ್ಯೋಪಶಾಂತಿ.

ಆ ರಾತ್ರಿ ಕಳೆಯಬಹುದು ಎಂಬ ಆಶೆ ಡಾಕ್ಟರಿಗಿರಲಿಲ್ಲ. ಆ ರಾತ್ರಿ ಆಕೆಗೆ ಆಕೆಯ ಬಂಧುಮಿತ್ರರು, ಬಾಪೂಜೀ ಒಂದು ಗಳಿಗೆ ಕೂಡಾ ವಿರಾಮವಿಲ್ಲದ ಹಾಗೆ ಉಪಚಾರ ಮಾಡುತ್ತಿದ್ದರು. ಎಚ್ಚರವಾಗಿಯೇ ಇದ್ದ ಬಾ ನಮ್ಮ ಪ್ರಶ್ನೆಗಳಿಗೆ ಒಂದು ಮಾತೊ, ಒಂದು ಸಲ ತಲೆ ತಿರುಗಿಸಿಯೋ ಉತ್ತರ ಕೊಡುತ್ತಿದ್ದಳು ; ಸಮಾಧಾನ ಹೇಳುತ್ತಿದ್ದಳು.

## ಗಾಂಧೀಜಿಯ ಶುಶ್ರೂಷೆ

ಒಂದು ಸಲಿ ಗಾಂಧೀಜೀ ಹತ್ತಿರ ಬರಲು ಬಾ ಕೈಯೆತ್ತಿ 'ಯಾರು' ಎಂತ ಕೇಳಿದಳು. ಗಾಂಧೀಜೀ ಕೈಯಾರೆ ೧ ಘಂಟೆ ಹೊತ್ತು ಆಕೆಯ ಹತ್ತಿರ ಕೂತು ಸೇವೆಮಾಡಿದ್ದು ಆಕೆಯ ವೇದನೆಯನ್ನು ಎಷ್ಟೋ ಮಟ್ಟಿಗೆ ಉಪಶಾಂತಿ ಮಾಡಿದ ಹಾಗೆ ಕಂಡಿತು. ಮಂಚಕ್ಕೆ ಹತ್ತಿರ ಹೋಗಿ ಬಾನ ಹತ್ತಿರ ಕೂತಿದ್ದರೆ, ಗಾಂಧೀಜೀ ಆಕೆಗಿಂತ ಎಷ್ಟೋ ವರ್ಷ ಚಿಕ್ಕವರ ಹಾಗೆ ಕಂಡರು.

ಈ ದೃಶ್ಯವನ್ನು ನೋಡಿ ನನಗೆ ಈಗ ೩೨ ವರ್ಷದ ಹಿಂದೆ ದಕ್ಷಿಣ ಆಫ್ರಿಕಾದಲ್ಲಿ ನಡೆದ ಒಂದು ಘಟನೆ ಜ್ಞಾಪಕಕ್ಕೆ ಬಂತು. ಮೂರು ನಾಲ್ಕು ತಿಂಗಳು ಸೆರೆಯಲ್ಲಿದ್ದು ಬಾನ ಆರೋಗ್ಯ ಸಂಪೂರ್ಣ ಶಿಥಿಲವಾಗಿ ಸೆರೆಯಿಂದ ಹೊರಗೆ ಬಂದಳು. ಆಗ ರೈಲ್ವೇ ಸ್ಟೇಷನ್ನಿನಲ್ಲಿ ನಮ್ಮ ಅಮ್ಮನನ್ನೂ ಬಾಪೂವನ್ನೂ ನೋಡಿ ಒಬ್ಬ ಯೂರೋಪಿಯನ್ ಪರಿಚಿತ 'ಈಕೆ ನಿಮ್ಮ ತಾಯಿಯೆ' ಎಂತ ಕೇಳಿದ.

ಮಂಗಳವಾರದ ಬೆಳಿಗ್ಗೆ ಅಮ್ಮ ಇದ್ದದ್ದೂ ಒಣಗಿ ಹೋದಳು. ಆದರೆ ಶಾಂತವಾಗೇ ಕಂಡಳು. ಸೋಮವಾರದ ಹೊತ್ತಿಗೆ ಆಕೆಗೆ ಇನ್ನೂ ಆಶೆಯಿತ್ತು; ಆದರೆ ಮಂಗಳವಾರದ ಹೊತ್ತಿಗೆ ಇನ್ನು ಆಶೆಯಿಲ್ಲ ಎಂಬುದು ಆಕೆಗೆ ಗೊತ್ತಾಗಿಹೋಯಿತು. ಮೂತ್ರಬದ್ಧವಾಗಿ ಹೋಗಿದ್ದರಿಂದ ಆಗಾಗ ವಿಸ್ಮೃತಿ ಕವಿಯುತ್ತಿದ್ದರೂ ಆಕೆಯ ಮುಖ ನಿಚ್ಚಳವಾಗಿತ್ತು. ಇದಕ್ಕೆ ಮನಃಶಾಂತಿಯೇ ಕಾರಣವಿರಬೇಕು. ಸೋಮವಾರದಿಂದ ಆಕೆ ಔಷಧ, ನೀರು ತೆಗೆದುಕೊಳ್ಳುವುದನ್ನು ಬಿಟ್ಟು ಬಿಟ್ಟಳು.

## ಹೋಗಲೆ ?

ಆದರೆ ಮಂಗಳವಾರದ ದಿನ ಗಂಗಾಜಲ ಕುಡಿಯಲು ಆಕೆ ಚೆನ್ನಾಗಿ ಬಾಯಿ ತೆರೆದಳು. ಗಂಗಾಜಲ ಸ್ವಲ್ಪ ಶಾಂತಿ ನೀಡಿತು.

ಮಧ್ಯಾಹ್ನ ಮೂರು ಗಂಟೆ ಹೊತ್ತಿಗೆ ಬಾ ನನ್ನನ್ನು ಕರೆದಳು.

'ಏನೋ ಒಂದು ದಿನ ಸತ್ತೇ ಸಾಯಬೇಕು ಎಂದ ಮೇಲೆ ಈ ಹೊತ್ತೇ ಆಗಿ ಹೋಗಲೇ' ಎಂದಳು ಬಾ ನನ್ನ ಹತ್ತಿರ.

ನಾನು ಆಕೆಯ ಕಿರಿಯ ಮಗ. ನನ್ನ ಮೇಲಿನ ಮೋಹದಿಂದಲೇ ಆಕೆ ಇನ್ನೂ ಜೀವ ಹಿಡಿದುಕೊಂಡಿರುವ ಹಾಗೆ ತೋರಿತು.

ಆದರೆ 'ಹೋಗುವುದಕ್ಕೆ ಯಾವಾಗಲಾರದೇನು?' ಎಂತ ಎಲ್ಲರೆ ದುರಿಗೂ ಹೇಳಿದ ಮಾತು ಹೇಳಿದ ಮೇಲೆ, ನನ್ನ ಕೈ ಬಿಟ್ಟು ಮುಖ ತಿರುಗಿಸಿಕೊಂಡುಬಿಟ್ಟಳು.

ಆ ಗಳಿಗೆಯಲ್ಲಿ ಆಡಿದ್ದಕ್ಕಿಂತ ಹೆಚ್ಚು ಸ್ಫುಟವಾಗಿಯಾಗಲಿ, ಪ್ರೇಮ ದಿಂದಾಗಲಿ ಆಕೆ ನನ್ನ ಕೈಲ ಯಾವಾಗಲೂ ಮಾತಾಡಿರಲಿಲ್ಲ.

ಆಮೇಲೆ ಆಕೆ ತನ್ನ ಎರಡು ಕೈ ಮುಗಿದು, ಯಾರ ನೆರವೂ ಇಲ್ಲದೆ ಮಂಚದ ಮೇಲೆ ಕೂತು, ತಲೆ ಬಗ್ಗಿಸಿಕೊಂಡು ಸಾಧ್ಯವಾದಷ್ಟು ಗಟ್ಟಿಯಾಗಿ ಕೆಲ ನಿಮಿಷ ರಾಮನಾಮ ಜಪ ಮಾಡಿದಳು. 'ಪರಾತ್ಪರ! ಕೃಪೆ ಮಾಡು!'

ನಾನು ಉಕ್ಕಿ ಬಂದ ಕಂಬನಿ ಒರೆಸಿಕೊಳ್ಳಲು ಹೊರಗಿನ ವರಾಂಡಕ್ಕೆ ಹೋದೆ. ಹೋಗುವ ಹೊತ್ತಿಗೆ ಸರಿಯಾಗಿ ಪೆನ್‌ಸಿಲಿನ್ ಔಷಧಿ ಬಂತು. ಆದರೆ ಅದನ್ನು ಉಪಯೋಗಿಸುವ ಉತ್ಸಾಹ ವೈದ್ಯರಿಗಿರಲಿಲ್ಲ.

ನ್ಯೂಮೋನಿಯಾ ಪ್ರಧಾನ ವ್ಯಾಧಿಯಲ್ಲ. ಪೆನ್‌ಸಿಲಿನ್‌ನಿಂದ ಮೂತ್ರ ವ್ಯಾಧಿ ಹೋಗದು. ಏನಾದರೇನು? ಕೈದಾಟಿಹೋಗಿತ್ತು ಖಾಯಿಲೆ. ಆದರು ಆ ಪೆನ್‌ಸಿಲಿನ್ ಕೊಡಲು ಏರ್ಪಾಟು ಮಾತ್ರ ನಡೆಯುತ್ತಲೇ ಇದ್ದವು.

## ಕಡೆಯ ಕಿರುನಗೆ

ಮತ್ತೆ ಅಮ್ಮನನ್ನು ನೋಡಲು ೫ ಗಂಟೆಯವರೆಗೂ ನನಗೆ ಎಡೆಯಾಗ ಲಿಲ್ಲ. ಈ ಸಲ ನನ್ನನ್ನು ನೋಡಿದ ಕೂಡಲೆ ಬಾ ಕಿರುನಗೆ ನಕ್ಕಳು. ಈ ಸಲ ವತ್ತುಮೂರು ವರ್ಷದಿಂದ ನನ್ನನ್ನು ಬೆಳಸಿದ್ದು ಆ ಕಿರುನಗೆಯೇ. ಕೈಬಿಟ್ಟು ಹೋಗುವಾಗಲೂ ಧೈರ್ಯ ಹೇಳಲು ತಾಯಿ ತನ್ನ ತುಟಿಯ ಮೇಲೆ ಹಾಯಿ ಸುವ ಕಿರುನಗೆ ಅದು.

ಅಮ್ಮನ ಮನಸ್ಸು ತುಂಬಾ ಮೃದು. ನಾನೆಂದರೆ ಇದ್ದದ್ದೂ ಮೃದುವಾಗು ತ್ತಿತ್ತು. ಆಕೆ ಹೀಗೆ ಎಲ್ಲರಿಗಿಂತ ನನ್ನ ಮೇಲೆ ಹೆಚ್ಚು ಮಮತೆ ತೋರಿದ್ದಕ್ಕೆ ಉಳಿದವರು ನನ್ನನ್ನು ಮನ್ನಿಸಬೇಕು. ಇತರ ವಿಧದಲ್ಲಿ ತನ್ನ ಸೃಷ್ಟಿಯನ್ನು

ಜ್ಯೋತಿರ್ಮಯವಾಗಿರಿಸಿದ ನನ್ನ ತಾಯಿ ಈ ಹೃದಯ ದೌರ್ಬಲ್ಯವನ್ನು ಭಗವಂತ ತಪ್ಪದೆ ಮನ್ನಿಸುತ್ತಾನೆಂಬ ನಂಬಿಕೆ ನನಗಿದೆ.

ಆಕೆಯ ಕಡೆಗೆ ನೋಡಿ ನನಗೆ ಆಕೆಗೆ ಪೆನ್‌ಸಿಲಿನ್ ಔಷಧಿ ಕೊಡಿಸಬೇಕು ಎನಿಸಿತು. ಈ ವಿಷಯವಾಗಿ ಡಾಕ್ಟರ ಕೈಲಿ ಮಾತನಾಡವುದು ನನ್ನ ಕರ್ತವ್ಯ ಎಂದು ತೋರಿತು. ಅವರೂ ಔಷಧಿ ಕೊಟ್ಟು ನೋಡೋಣ ಎಂದರು. ಆದರೂ ಅದರಿಂದಲೂ ಏನೂ ಉಪಯೋಗವಾಗದಿರಬಹುದೆಂಬ ನಿರಾಶೆ ಅವರ ಮಾತಿನಲ್ಲಿ ಇಣುಕುತ್ತಿತ್ತು.

ಅಮ್ಮನಿಗೆ ತುಂಬಾ ನೋವಾಗುವ ಈ ಇಂಜೆಕ್ಷನ್ ಕೊಡಿಸಲು ನಾನು ಒಪ್ಪಿರುವುದನ್ನು ಕೇಳಿ, ಬಾಪೂ ಆ ದಿನ ತಮ್ಮ ಸಾಯಂಕಾಲದ 'ವಾಕಿಂಗ್' ಬಿಟ್ಟು ನನ್ನ ಕೈಲಿ ಮಾತಾಡಲು ಬಂದರು.

"ಎಂಥಾ ಔಷಧಿಯನ್ನು ಕೊಟ್ಟರೂ ನಿಮ್ಮ ಅಮ್ಮನ ಕಾಯಿಲೆ ಗುಣವಾಗದು. ಆದರೂ ನೀನು ಪನ್‌ಸಿಲಿನ್ ಕೊಟ್ಟೇ ಕೊಡಬೇಕೆಂತ ಹಟ ಹಿಡಿದರೆ ನಾನೇನೂ ಬೇಡ ಎನ್ನುವುದಿಲ್ಲ. ನಿಮಗೆ ಬರೀ ಆಸೆ. ಈಗೆರಡು ದಿನದಿಂದ ಆಕೆ ಔಷಧವನ್ನೇ ಮುಟ್ಟುತ್ತಿಲ್ಲ; ಕೊನೆಗೆ ಗಂಜಿ ಕೂಡಾ ಕುಡಿಯುತ್ತಿಲ್ಲ. ಈಗಾಕೆ ದೇವರ ಕೈಲಿದಾಳೆ. ಏನೋ ಹೇಳುತ್ತಿದೇನೆಂತಲೆ ಅಂದುಕೊಳ್ಳಬಹುದು ನೀನು. ಆದರೂ ನೀನೀಗ ಮಾಡುತ್ತಿರುವುದು ಸರಿಯಾದದ್ದಲ್ಲವೆಂದೇ ನನ್ನ ಅಭಿಪ್ರಾಯ. ಸಾಯಲಿರುವ ತಾಯಿಗೆ ಪ್ರತಿ ನಾಲ್ಕುಗಂಟೆಗೊಂದು ಸಾರಿ, ಆರು ಗಂಟೆಗೊಂದು ಬಾರಿ, ಇಂಜಕ್ಷನ್ ಕೊಡಿಸಿ, ಸುಮ್ಮಸುಮ್ಮನೆ ಆಕೆಗೆ ನೋವುಂಟುಮಾಡುತ್ತಿದೀಯೆ' ಎಂದರು.

ಇದರ ಮೇಲೆ ಇನ್ನು ಚರ್ಚಿಸುವುದು ಒಳ್ಳೆಯದಲ್ಲವೆಂದು ಊಹಿಸಿದೆ. ಡಾಕ್ಟರಿಗೆ ತಮ್ಮ ಮೇಲಿನ ಭಾರ ಇಳಿದ ಹಾಗಾಯಿತು.

ನಾನೂ ನಮ್ಮ ತಂದೆ ಇಬ್ಬರೂ ಮಾತಾಡುತ್ತಿರುವಾಗ—ನಾವಿಬ್ಬರೂ ಹಿಂದೆಂದೂ ಇಷ್ಟು ಸಲಿಗೆಯಿಂದ ಮಾತಾಡಿರಲಿಲ್ಲ—ಅಮ್ಮ ನಿಮ್ಮನ್ನು ಕರೆಯುತ್ತಿದಾಳೆ ಎಂದು ಗಾಂಧೀಜಿಗೆ ಸುದ್ದಿ ಬಂತು.

ಕೂಡಲೇ ಗಾಂಧೀಜೀ ಬಾನ ಬಳಿಗೆ ಹೋಗಿ, ಅದುವರೆಗೂ ಅಮ್ಮನನ್ನು ತಬ್ಬಿಕೊಂಡು ಕೂತವರನ್ನು ಎಬ್ಬಿಸಿ, ಮಂಚದಮೇಲೆ ಕೂತು, ಆಕೆಯ ತಲೆ

ಯನ್ನು ತಮ್ಮ ಎದೆಗೊತ್ತಿಕೊಂಡು, ಕೈಲಾದಷ್ಟು ಮಟ್ಟಿಗೆ ಆಕೆಗೆ ಶಾಂತಿ ನೀಡಲು ಯತ್ನಿಸಿದರು.

## ಕಡೆಯ ಗಳಿಗೆಗಳು.

ಹತ್ತುಹನ್ನೆರಡು ಜನದ ಜೊತೆಗೆ ಮಂಚದ ಇದಿರಿನಲ್ಲಿ ನಿಂತಿದ್ದ ನಾನು ಅಮ್ಮನ ಮುಖವನ್ನೇ ನೋಡುತ್ತಾ ಇದ್ದೆ. ಬರಬರುತ್ತಾ ಮುಖ ಕಳೆಗೆಡುತ್ತಿತ್ತು. ಹಾಸಿಗೆ ಸರಿಹೋಗದೆ, ಅತ್ತ ಇತ್ತ ಹೊರಳುತ್ತಿದ್ದಳು. ಬಾ.

ಅಷ್ಟರಲ್ಲೇ ಒಂದು ಕಣ್ಣು ಕಪಿಮುಕೊಂಡಿತು. ಎಲ್ಲರ ಕಣ್ಣೂ ಕಂಬನಿಯ ಚಿಲುಮೆಗಳಾದವು. ಗಾಂಧೀಜೀ ಮಾತ್ರ ಉಕ್ಕಿಬಂದ ಕಣ್ಣೀರನ್ನು ತಡೆದುಕೊಂಡರು.

ಅರ್ಧಚಂದ್ರಾಕಾರವಾಗಿ ನಿಂತಿದ್ದೆವು ನಾವು. ಅದುವರೆಗೂ ಆಕೆಯ ಜೊತೆಯಲ್ಲಿ ನಾವು ಪ್ರೀತಿಯಿಂದ ಓದುತ್ತಿದ್ದ ಗೀತೆಯ ಶ್ಲೋಕಗಳನ್ನು ಶುದ್ಧ ಕಂಠದಿಂದ ಪಠಿಸಿದೆವು.

## ಎರಡು ನಿಮಿಷದಲ್ಲೇ ಹಂಸ ಹಾರಿಹೋಯಿತು

ಆಗಾಖಾ಼ ಮಂದಿರದಲ್ಲಿದ್ದವರೊಬ್ಬರು ಹೇಳಿದ ಹಾಗೆ, ನಮ್ಮ ಊಟ ಮುಗಿಯುವವರೆಗೆ ಇದ್ದು ಆಕೆ ಹೊರಟುಹೋದಳು. ಆರು ಗಂಟೆಗೆಲ್ಲಾ ಊಟ ಮುಗಿದುಹೋಗುತ್ತದೆ ಅಲ್ಲಿ.

ಸಾಯಂಕಾಲ ೭–೩೫ಕ್ಕೆ ಆಕೆ ದಿವ್ಯಲೋಕಕ್ಕೆ ಹೊರಟುಹೋದರು.

ಸೋಮವಾರ ಆಕೆಯ ಅಸ್ಥಿಗಳನ್ನು ಅಲಹಾಬಾದಿಗೆ ತೆಗೆದುಕೊಂಡು ಹೋಗುತ್ತಾ ನಾನೀ ಮಾತು ಬರೆಯುತ್ತಿದ್ದೇನೆ.

ನನಗಂತೂ ಈಗ ಅಮ್ಮನ ಜೊತೆಯಲ್ಲೇ ಪ್ರಯಾಣ ಮಾಡುತ್ತಿರುವ ಹಾಗಿದೆ. ಆದರೆ ನಾಳೆಯಾದ ಮೇಲೆ ಆಕೆಯ ಜೊತೆಯಲ್ಲಿ ಮತ್ತೆ ಪ್ರಯಾಣ ಮಾಡುವ ಸುಖವೇ ಇಲ್ಲ.

ದಹನ ಕರ್ಮ ಮುಗಿದ ಮರುದಿನ ಬಾ ಅಸ್ತಿಗಳಲ್ಲಿ ಕೆಲವನ್ನು ಅರಮನೆಯಲ್ಲಿ ಇಟ್ಟೆವು. ಇವುಗಳ ಜೊತೆಗೆ ಅಮ್ಮನ ಕೈಯ ಐದು ಬಳೆಗಳೂ ಇದ್ದವು. ದಹನ ಕರ್ಮ ಆದ ವೇಳೆ ಕೂಡಾ ಅಚ್ಚಳಿಯದೆ ಇದ್ದವು.

೧೯೪೩ನೆ ಸೆಪ್ಟೆಂಬರ್‌ನಿಂದ ನಿರ್ಬಂಧ ಶಿಬಿರದಲ್ಲಿ ಅಮ್ಮನಿಗೆ ಖಾಯಿಲೆ ಪ್ರಾರಂಭವಾಯಿತು ನೊಟ್ಟಮೊದಲ ಬಾರಿಗೆ ಆಗ ಆಕೆಯ ಹೃದಯ ದುರ್ಬಲವಾಗಿರುವುದು ಗೊತ್ತಾಯಿತು ನಾಲ್ಕಾರು ವರ್ಷದಿಂದಲೂ ಆಕೆಯ ಆರೋಗ್ಯ ಅಷ್ಟಕ್ಕಷ್ಟೆ ಆಗಿದರೂ ಈ ಹೃದಯ ದೌರ್ಬಲ್ಯ ಮಾತ್ರ ಎಂದೂ ಇರಲಿಲ್ಲ ೧೯೪೩ನೇ ಸೆಪ್ಟೆಂಬರ್‌ನಲ್ಲಿ ಆರೋಗ್ಯ ಕೆಟ್ಟ ಬಳಿಕ ಮತ್ತೆ ಉತ್ತಮವಾಗಲಿಲ್ಲ.

ಶಾರೀರಕವಾಗಿಯಾಗಲಿ, ಮಾನಸಿಕವಾಗಿಯಾಗಲಿ, ಆಕೆ ಕಾರಾಗೃಹವಾಸ ಮಾಡುವ ಸ್ಥಿತಿಯಲ್ಲಿರಲಿಲ್ಲ

ಇದುವರೆಗಾಗಲೇ ಬಾ ಎಷ್ಟೋ ಸಲ ಸೆರೆಮನೆಯ ಸುಖ ಅನುಭವಿಸಿದ್ದಳು ಇವರಲ್ಲೆಲ್ಲಾ ರಾಜಕೋಟೆಯ ಕುಗ್ರಾಮವೊಂದರಲ್ಲಿ ಅನುಭವಿಸಿದ್ದು ತುಂಬಾ ಹೆಸರಾದದ್ದು ಆಗಲೇ ಆಕೆಯ ಆರೋಗ್ಯ ತುಂಬಾ ಕೆಟ್ಟಿತ್ತು. ಆದರೆ ಈ ಕಟ್ಟ ಕಡೆಯ ಕಾರಾಗೃಹವಾಸವೇ ಆಕೆಯನ್ನು ಕೊಂದದ್ದು ಈ ಅಗ್ನಿಪರೀಕ್ಷೆಯಲ್ಲಿ ಗೆಲ್ಲುವ ಮನೋದಾರ್ಢ್ಯವಾಗಲಿ, ಶರೀರ ಸೌಖ್ಯವಾಗಲಿ ಆಕೆಗೆ ಇರಲಿಲ್ಲ. ಈ ಸಲದ ಸೆರೆಯ ಪರಿಸ್ಥಿತಿ ಈಕೆಗೆ ತುಂಬಾ ಹೊಸದು ಅರಮನೆಯ ಸುತ್ತಲೂ ಮುಳ್ಳು ಬೇಲಿ, ಸರ್ಪ ಕಾವಲು. ಉಳಿದವುಗಳ ಬಗ್ಗೆ ಹೇಳಬೇಕಾದ್ದೇ ಇಲ್ಲ.

ಸೇವಾಗ್ರಾಮಕ್ಕೆ, ಪರ್ಣಕುಟಿಗೆ ಹೋಗಬೇಕೆಂದು ಆಕೆಯ ಹೃದಯ ಕಾತರಿಸುತ್ತಿತ್ತೆಂದು ಹೇಳಿ ಅಕ್ಕರೆಯ ತಾಯಿಯ ಪವಿತ್ರಸ್ಮೃತಿಗೆ ನಾನೇನ ಅಪಚಾರವನ್ನೂ ಮಾಡುತ್ತಿಲ್ಲ

ಮಿತಿ, ಅವಧಿ ಇಲ್ಲದೆ ಸೆರೆಯಲ್ಲಿರುವುದು ಆಕೆಗೆ ತುಂಬಾ ಅಸಹ್ಯವಾಗಿತ್ತು. ಮೈಗೆ ಎಷ್ಟು ಸುಖ ಕೊಟ್ಟರೆ ಏನು-ಮನಸ್ಸಿಗೆ, ಆತ್ಮಕ್ಕೆ ಹಿತವಾಗಿಲ್ಲದಿರುವಾಗತನಗೆ ಪ್ರಿಯರಾದ ಸಾವಿರಾರು ಜನ ತನ್ನ ಹಾಗೇ ಈ ದುರ್ಭರ ಕಾರಾಗಾರ ಕಷ್ಟವನ್ನನುಭವಿಸುತ್ತಿರುವುದನ್ನು ನೋಡಿ ಆಕೆಯ ಮಿದುವಾದ

ಹೃದಯ ಇದ್ದದ್ದೂ ನೊಂದುಕೊಂಡಿತು. ಉಳಿದವರೆಲ್ಲರೂ ಬಿಡುಗಡೆಯಾದರೆ ಸಾಕು, ನಾನೂ ಬಾಪೂ ಇನ್ನೂ ಅಷ್ಟು ಕಾಲ ಸೆರೆಯಲ್ಲಿದ್ದೇವು ಎಂದು ಈಗ ಒಂದು ಒಂದೂವರೆ ವರ್ಷದಿಂದ ಬಾ ಪ್ರಾರ್ಥಿಸುತ್ತಿದ್ದಳು.

ಬೇಕಾದರೆ ಮತ್ತೆ ಆಗಾಖಾನ್ ಅರಮನೆಗೆ ಹಿಂದಿರುಗಬಹುದೆಂದು ಷರತ್ತು ಹಾಕಿಯಾದರೂ ಆಕೆಯನ್ನು ಬಿಡುಗಡೆ ಮಾಡಿದ್ದರೆ, ಆಕೆ ಜೀವ ಉಳಿಯುತ್ತಿತ್ತೋ ಏನೋ ?

ಅಮ್ಮ ನಮ್ಮನ್ನು ಕೈ ಬಿಟ್ಟು ಹೋದ್ದರಿಂದ ನಮ್ಮನ್ನು ಸುಡುತ್ತಿರುವ ಶೋಕದಾವಾನಲದಲ್ಲಿ ತಾವೂ ಸಿಕ್ಕಿ ಸುಡುತ್ತಿರುವ ಲಕ್ಷಾಂತರ ಭಾರತ ಸ್ತ್ರೀ ಪುರುಷರೇ ನಮ್ಮ ಸೋದರ ಸೋದರಿಯರು. ಅವರನ್ನು ಬಿಟ್ಟ ಬೇರೆ ಅಣ್ಣ ತಮ್ಮಂದಿರು ನಮಗಿಲ್ಲ. ಇಷ್ಟು ಕೋಟಿ ಜನ ಅಣ್ಣತಮ್ಮಂದಿರಿಗೆ, ಅಕ್ಕ ತಂಗಿಯರಿಗೆ ನಮ್ಮನ್ನು ಒಪ್ಪಿಸಿ ಅಮ್ಮ ಹೊರಟು ಹೋದಳು.

ಇಷ್ಟು ಹೇಳಿ ಈ ದುಃಖದ ಸಿಡಿಲಿನ ಪೆಟ್ಟನ್ನು ಬಾಪೂ ಹೇಗೆ ಭರಿಸುತ್ತಿದಾರೋ ಒಂದು ಮಾತು ಹೇಳದೆ ಇರಲಾರೆ. ಅವರಲ್ಲೂ ದುಃಖ ರೇಖೆ ಮೂಡಿದೆ ; ಅರ್ಧಾಂಗಿಯ ಈ ಚಿರವಿಯೋಗದ ಉರಿಗೆ ಸಿಕ್ಕು ಬಾಪೂ ಪರಿತಪಿಸುತ್ತಿದಾರೆ. ಈ ಹೊತ್ತು ಗಾಂಧೀಜೀ ದೇಶದ ಜನಕೋಟಿಯ ನಾಯಕರಾಗಿದ್ದರೆ, ಆ ಪುಣ್ಯದಲ್ಲಿ ಬಹುಭಾಗ ಅಮ್ಮನದು. ಅಂಥ ಸಹಚರಿ ಕೈಜಾರಿ ಹೋದರೂ ಬಾಪೂ ಆಧ್ಯಾತ್ಮಿಕ ಶಾಂತಿಯಿಂದ ಅಚಲರಾಗಿದಾರೆ. ಹೃದಯ ವೇದನೆಯನ್ನು ಆತ ಎಷ್ಟುಮಟ್ಟಿಗೆ ತನ್ನಲ್ಲೇ ಹುದುಗಿಸಿಕೊಂಡಿರಬಲ್ಲನೆಂಬುದನ್ನು ಈ ಹೊತ್ತು ನಮಗೆ ತೋರುತ್ತಿದಾರೆ ಆತನ ಸುತ್ತಲಿರುವ ವಾತಾವರಣದಲ್ಲಿ ವಿಚಾರವಿದೆ, ವಿಷಾದವಿಲ್ಲ. ನಾನೂ ನನ್ನ ಸೋದರರೂ ಶುಕ್ರವಾರದ ಅರಮನೆ ಬಿಟ್ಟು ಹೊರಡುವಾಗ ಬಾಪೂ ಕಣ್ಣು ತೋಯಿಸಿಕೊಳ್ಳದೆ ಯಾವಾಗಿನ ಹಾಗೇ ನಾಲ್ಕು ಒಳ್ಳೇ ಮಾತಾಡಿದರು.

ದೇವದಾಸ್ ಗಾಂಧೀ.



# ಧೀರ ಸತಿ



'ಬಾಗೆ ಹೇಳು. ಇನ್ನೊಬ್ಬರಾಗಿದ್ದರೆ ಈ ಗಂಡನ ಝುಳಕ್ಕೆ ಬಾಡಿ ಹೋಗುತ್ತಿದ್ದರು. ಆಕೆಯ ಪ್ರೀತಿ ನನಗೊಂದು ನಿಧಿ.'



—ಗಾಂಧೀಜೀ.



ಬಾನ ಬೃಂದಾವನದ ಬಳಿ ಬಾಪೂ ಭಗೀರಥನಂತೆ ನಿಂತಿದ್ದರು.
ಮುಂಜಾನೆಯಿಂದ ...ಸಂಜೆ ೪ ಆಯಿತು.
ಇನ್ನಾದರೂ·ವಿಶ್ರಮಿಸಿ ಎಂದರು ಪರಿವಾರ.

'ಏನು? ಇಷ್ಟು ಬೇಗವೆ ಇಲ್ಲಿಂದ ಹೊರಟು ಹೋಗಲೆ?
ಅಷ್ಟು ವರ್ಷಗಳ ಸೌಹಾರ್ದ ಇಷ್ಟು ಬೇಗನೆ
ನಿಮಗೆ ಮರೆತುಹೋಯಿತೇ ಎನ್ನಲೆ ಬಾ?'
ಎಂದರು ಬಾಪೂ.

★

"ನನ್ನ ಹೆಂಡತಿಯ ಹಾಗೆ ನನ್ನನ್ನು ಮಿಡಿಯಬಲ್ಲ ಹೆಣ್ಣು
ಈ ಜಗತ್ತಿನಲ್ಲಿ ಯಾರೂ ಇಲ್ಲ. ಹೀಗೆಂದರೆ
ಆಕೆಯಲ್ಲಿ ದೋಷವಿಲ್ಲವೆಂದಲ್ಲ.
ಹಿಂದೂಧರ್ಮದ ಬಗ್ಗೆ
ನನಗೆ ಅದೇ ತರದ
ಭಾವನೆಯಿದೆ.
ಅದರಲ್ಲಿ
ತಪ್ಪಿರಲಿ, ಕುಂದಿರಲಿ."

# ಧೀರ ಸತಿ

ನನಗೆ ೧೩ನೇ ವಯಸ್ಸಿನಲ್ಲಿ ಮದುವೆಯಾಯಿತು. ನಾನೂ ಕಸ್ತೂರಿ ಬಾಯಿ ಒಂದೇ ಓರಗೆಯವರು. *

ನಾವು ಮದುವೆ ಜಗಲಿ ಮೇಲೆ ಹೇಗೆ ಕೂತಿದ್ದೆವೋ, ಸಪ್ತಪದಿಯನ್ನು ಹೇಗೆ ಮುಗಿಸಿದೆವೋ, ಕಣಕಮುಂಡೆಯನ್ನು ಹೇಗೆ ಪರಸ್ಪರ ಚರ್ವಣ ಮಾಡಿಸಿದೆವೋ, ಇಬ್ಬರೂ ಕೂಡಿಇರಲು ಹೇಗೆ ಮೊದಲಿಟ್ಟೆವೋ, ಎಲ್ಲವೂ ಅಚ್ಚಳಿಯದಂತೆ ನೆನಪಿವೆ. ಈಗಲೂ ಎಲ್ಲವನ್ನೂ ಚಿತ್ರಿಸಿಕೊಳ್ಳಬಲ್ಲೆ. ಆ ಪ್ರಥಮ ರಾತ್ರಿ....... ! ಏನೂ ಅರಿಯದ ಹಸುಳೆಗಳು ನಾವು ಇಬ್ಬರೂ ಆ ದಿನ

---

* ಕಸ್ತೂರಿ ಬಾ ಬಾಪೂ ಹುಟ್ಟಿದೂರಲ್ಲೇ ಹುಟ್ಟಿದರು. ಇವರ ಜನನ ಪೋರ್ಬಂದರ್‌ನಲ್ಲಿ. ಗುಜರಾತಿ ಜನರಲ್ಲಿ ಜಾತಕ ತಯಾರಿಸುವ ಪದ್ಧತಿ ಇರಲಿಲ್ಲ. ತಿಥಿ, ವಾರ, ನಕ್ಷತ್ರಗಳ ಸಂಪ್ರದಾಯ ಇರಲಿಲ್ಲ. ಎಂತಲೇ ಕಸ್ತೂರಿ ಬಾ ಹುಟ್ಟಿದ ದಿನ, ವಾರ ತಿಳಿದಿಲ್ಲ. ಬಾಪೂ ಅಣ್ಣ ಲಕ್ಷ್ಮೀದಾಸ್ ಗಾಂಧಿಯವರ ಕುಟುಂಬದ ಕಾಗದಪತ್ರಗಳ ಮೂಲಕ, ಈಕೆ ೧೮೬೯ರ ಏಪ್ರಿಲ್ ತಿಂಗಳಲ್ಲಿ ಹುಟ್ಟಿದರೆಂದು ತಿಳಿದುಬರುತ್ತದೆ. ಅಂದರೆ ಗಾಂಧೀಜಿಗಿಂತ ಏಳು ತಿಂಗಳು ಹಿರಿಯರು ಕಸ್ತೂರಿಬಾ.

ಕಸ್ತೂರಿಬಾ ಅಣ್ಣ ಶ್ರೀ ಮಾಧವದಾಸ್ ಗೋಕುಲ್‌ದಾಸ್ ಮಾಕಂಜಿಯವರ ಹೇಳಿಕೆಯಂತೆ ಬಾ ಗಾಂಧೀಜಿಗಿಂತ ಮೂರು–ನಾಲ್ಕು ತಿಂಗಳು ಚಿಕ್ಕವರು. ಬಾಪೂ ಹೇಳಿದಾರೆ—'ನಾವಿಬ್ಬರೂ ಸಮಾನ ವಯಸ್ಸಿನವರು' ಎಂತ.

ಹತ್ತಿ, ಧಾನ್ಯ, ಬಟ್ಟೆಗಳ ವ್ಯಾಪಾರಿಯಾಗಿದ್ದ ಗೋಕುಲದಾಸ್ ಮಾಕಂಜಿ, ವೆರಾಜ್ ಕುಂವರ್ ಬಾ ಇವರ ಹಿರಿಯ ಮಗಳು ಕಸ್ತೂರಿ ಬಾ. ಮನೆಯ ಮುದ್ದಿನ ಮಗಳು. ಗಾಂಧೀಜಿಯ ತಂದೆ ಕರಮ್‌ಚಂದ ಗಾಂಧೀ, ಗೋಕುಲ್ ದಾಸ್ ಮಾಕಂಜಿ ಪರಮ ಮಿತ್ರರು. ಈ ಮೈತ್ರಿಯನ್ನು ಚಿರಕಾಲ ಉಳಿಸಲು ಇಬ್ಬರು ಹಿರಿಯರೂ ಮನಸ್ಸು ಮಾಡಿದರು. ಬಾ ಇನ್ನೂ ೭ ವರ್ಷದ ಕೂಸಾಗಿದ್ದಾಗ ೧೮೭೬ರಲ್ಲಿ ಆಕೆಯ ವಿವಾಹ ಮೋಹನದಾಸರೊಡನೆ ಆಗಬೇಕೆಂದು ನಿಶ್ಚಯವಾಯಿತು. ಶಾಸ್ತ್ರೋಕ್ತವಾದ ನಿಶ್ಚಯ ೧೮೮೨ರಲ್ಲಿ ನಡೆದು, ೧೮೮೩ರಲ್ಲಿ ವಿವಾಹ ನೆರವೇರಿತು.

ಏನೂ ತಿಳಿಯದೆಯೇ ಸಂಸಾರ ಸಾಗರದೊಳಕ್ಕೆ ಧುಮುಕಿದೆವು. ಮೊದಲ ರಾತ್ರಿ ಹೇಗೆ ನಡೆದುಕೊಳ್ಳಬೇಕೋ ನಮ್ಮ ಅತ್ತಿಗೆ ನನಗೆ ಚೆನ್ನಾಗಿ ಹೇಳಿ ಕೊಟ್ಟಿದ್ದಳು. ನನ್ನ ಹೆಂಡತಿಗೆ ಯಾರು ಹೇಳಿಕೊಟ್ಟಿದ್ದರೋ ಕಾಣೆ. ಆಕೆಯನ್ನು ನಾನು ಕೇಳಿಲ್ಲ. ಈಗ, ಇಷ್ಟು ದಿನದ ಮೇಲೆ, ಕೇಳಿ ತಿಳಿದು ಕೊಳ್ಳುವ ಇಷ್ಟವೂ ಇಲ್ಲ.

ಮದುವೆಯಾದ ಮೇಲೆ ನನ್ನ ಹೆಂಡತಿ ಪತಿಪರಾಯಣೆಯಾಗಿರಬೇಕು ಎಂಬ ವಿಚಾರ ಅವಳನ್ನು ಪತಿಪರಾಯಣೆಯಾಗಿ ಇಟ್ಟಿರಬೇಕೆಂಬ ಭಾವಕ್ಕೆ ತಿರುಗಿತು. ಅದಕ್ಕೆ ಉಪಾಯ, ಅವಳ ಮೇಲೆ ಕಾವಲಿರುವುದು ಎಂದು ಭಾವಿಸಿದೆ. ಅವಳ ಪಾತಿವ್ರತ್ಯ ಎಳ್ಳಷ್ಟೂ ಸಂದೇಹಾಸ್ಪದವಲ್ಲ. ಆದರೆ ಅಸೂಯೆಗೆ ಕಾರಣ ಬೇಕೆ? ಅವಳು ಯಾವಾಗ ಎಲ್ಲಿ ಹೋದರೂ ನನಗೆ ತಿಳಿಯಬೇಕು. ಅಂದರೆ ನನ್ನನ್ನು ಕೇಳದೆ ಎಲ್ಲಿಗೂ ಹೋಗಕೂಡದು ಎಂದು ಕಟ್ಟು ಮಾಡಿದೆ.

ಈ ನಿರ್ಬಂಧ ಆಕೆಗೊಂದು ಬಂಧನವಾಯಿತು. ಕಸ್ತೂರಿ ಬಾಯಿ ಇಂಥದ್ದನ್ನು ಸಹಿಸುವ ಹುಡುಗಿಯಲ್ಲ. ಇದರಿಂದ ದುಃಖಕರವಾದ ಕಲಹ ಬೀಜ ಬಿತ್ತಿದಂತಾಯಿತು. ನನ್ನನ್ನು ಕೇಳದೆಯೆ ಆಕೆ ತನ್ನ ಇಷ್ಟ ಬಂದೆಡೆ ಹೋಗಲಾರಂಭಿಸಿದಳು. ನಾನು ಎಷ್ಟೆಷ್ಟು ಅಂಕೆಯಲ್ಲಿಡಬಯಸಿದರೆ ಅಷ್ಟಷ್ಟು ಅವಳ ಸ್ವೇಚ್ಛಾ ವರ್ತನೆ ಬೆಳೆಯಿತು. ಇದರ ಪರಿಣಾಮವಾಗಿ ಪರಸ್ಪರ ಮಾತುಬಿಟ್ಟೆವು. ಈಗ ನನಗನಿಸುತ್ತದೆ: ಕಸ್ತೂರಿಬಾಯಿಯ ಸ್ವತಂತ್ರ ವೃತ್ತಿ ಯಲ್ಲಿ ಏನೂ ತಪ್ಪಿರಲಿಲ್ಲ. ದೇವರ ದರ್ಶನಕ್ಕೋ, ಗೆಳೆಯರನ್ನು ನೋಡಲಿಕ್ಕೋ ಹೋಗದಂತೆ ತಡೆದರೆ ಪಾಪದ ಸೊಂಕೇ ಕಾಣದ ಹುಡುಗಿ ಸಹಿಸಿಯಾಳೆ? ನನ್ನ ಅಧಿಕಾರ ಆಕೆಯ ಮೇಲೆ ಎಂದರೆ ಆಕೆಗೆ ನನ್ನ ಮೇಲೆ ಅಧಿಕಾರ ವಿಲ್ಲವೆ? ಈಗ ಇದೆಲ್ಲಾ ಗೊತ್ತಾಗಿದೆ. ಆಗ ಮಾತ್ರ ಯಾಜಮಾನ್ಯದ ಆಸೆ.

ಯಾವಾಗಲೂ ಹೀಗೆ ಇರುತ್ತಿರಲಿಲ್ಲ ನಮ್ಮ ಸಂಸಾರ. ನನ್ನೀ ನಿಷ್ಠು ರತೆಗೆ ಕಾರಣ ನನ್ನ ಪ್ರೇಮ. ನನ್ನ ಹೆಂಡತಿಯನ್ನು ಆದರ್ಶ ಸತಿಯನ್ನಾಗಿ ಮಾಡುವ ಉದ್ದೇಶ ನನ್ನದು. ಅವಳ ಬಾಳು ಶುದ್ಧವಾಗಬೇಕು; ನನ್ನ ದಾರಿಯನ್ನೆ ತುಳಿಯಬೇಕು: ನಮ್ಮಿಬ್ಬರ ಬಾಳೂ ಒಂದಾಗಬೇಕು; ಇದು ನನ್ನ ಹೆಬ್ಬಯಕೆ.

ಕಸ್ತೂರಿಬಾಯಿಗೆ ಓದುಬರೆಹ ಬಾರದು. ಬಲು ಸರಳ ಸ್ವಭಾವಿ. ಸ್ವಾತಂತ್ರ್ಯ ಪ್ರೇಮಿ. ಕೆಲಸದಲ್ಲಿ ಉಡದ ಹಿಡಿತದಂಥ ಛಲ. ಮಾತು—ನನ್ನೊಡನೆಯಂತೂ—ತೀರಾ ಕಡಮೆ. ಆಕೆಗೆ ಓದು ಹೇಳಿಕೊಡಬೇಕೆಂದು ನನಗೇನೊ ಬಲು ಉತ್ಸಾಹ. ತಾನು ಓದಬೇಕೆಂಬ ಉತ್ಸಾಹ ಆಕೆಗೆ ಹುಟ್ಟಿದಂತೆ ಕಾಣೆ.

ನನಗೇನೋ ಓದು ಹೇಳುವ ಆಸೆ ಬೆಟ್ಟದಷ್ಟಿದ್ದರೂ ನನ್ನ ವಿಷಯಾಭಿಲಾಷೆಯಲ್ಲಿ ಅದಕ್ಕೆ ಬಿಡುವೆಲ್ಲಿ? ಅಂತೂ ಇಂತೂ ನನ್ನ ಪ್ರಯತ್ನ ಸಫಲವಾಗಲಿಲ್ಲ. ಆಗ ನಾನು ಮೋಹಾಂಧನಾಗಿರದಿದ್ದರೆ ಕಸ್ತೂರಿಬಾ ವಿದುಷಿಯಾಗುತ್ತಿದ್ದಳು. ಓದಿನಲ್ಲಿ ಆಕೆಗಿದ್ದ ಬೇಸರವನ್ನೂ ಗೆಲ್ಲಬಹುದಾಗಿತ್ತು. ನಿಷ್ಕಲ್ಮಷ ಪ್ರೀತಿಗೆ ಅಸಾಧ್ಯವಾದ್ದು ಏನೂ ಇಲ್ಲ.

ಆದರೆ ನಾನು ಮೋಹಾಂಧನಾಗಿದ್ದೆ.

* * * *

ನಾನು ಬಹಳ ಅಂಜುಬುರುಕ. ರಾತ್ರಿ ಒಂಟಿಯಾಗಿ ಹೊರಗೆ ಹೋಗಲು ಧೈರ್ಯವಿರಲಿಲ್ಲ. ಬೆಳಕು ಇಲ್ಲದೆ ನಿದ್ದೆ ಮಾಡಲು ಸಾಧ್ಯವಿರಲಿಲ್ಲ. ಹೊಸ ಹರೆಯದ ಹೆಂಡತಿಗೆ ಹೇಗೆ ನನ್ನ ಹೆದರಿಕೆ ತಿಳಿಸುವುದು? ನನಗಿಂತ ಆಕೆ ಹೆಚ್ಚು ಧೈರ್ಯಶಾಲಿ. ನನಗೆ ಗೊತ್ತು. ನನ್ನನ್ನು ಕಂಡು ನನಗೇ ನಾಚಿಕೆ. ಆಕೆಗೆ ಹಾವು, ಪಿಶಾಚಿ ಯಾವ ಭಯವೂ ಇಲ್ಲ. ಕತ್ತಲಲ್ಲಿ ಎಲ್ಲಿಗೆ ಬೇಕಾದರೂ ಹೋಗುತ್ತಿದ್ದಳು.

ನನ್ನ ಗೆಳೆಯನ ಮಾತನ್ನು ಕೇಳಿ ನನ್ನ ಹೆಂಡತಿಗೆ ಬಲು ಸಂಕಟ ಕೊಡುತ್ತಿದ್ದೆ. ಆ ಹಿಂಸೆಗಾಗಿ ಎಷ್ಟು ಪಶ್ಚಾತ್ತಾಪ ಪಟ್ಟರೂ ಸಾಲದು ಆದನ್ನು ಮರೆಯಲಾರೆ. ಆ ತಪ್ಪನ್ನು ಕ್ಷಮಿಸಲಾರೆ. ಹಿಂದೂ ಸ್ತ್ರೀಯರೆಂದು ಅಂಥ ಕಷ್ಟವನ್ನು ಸಹಿಸುತ್ತಾರೆ. ಅಂತೇ ಹೆಂಗಸೆಂದರೆ ಸಹನೆಯ ಪುತ್ಥಳಿ ಎನ್ನುತ್ತೇನೆ.

ನನ್ನ ದೋಷಗಳಿಂದ ಆಕೆ ಕಷ್ಟ ಅನುಭವಿಸಬೇಕಾಗಿತ್ತು. ಒಂದು ಸಲ ಆಕೆಯನ್ನು ತವರುಮನೆಗೆ ಕಳಿಸಿಬಿಟ್ಟೆ. ಬಹು ಗೋಳಾಡಿಸಿದ ಮೇಲೇ

ಆಕೆಯನ್ನು ಮತ್ತೆ ಬರಮಾಡಿಕೊಳ್ಳಲು ನಾನು ಒಪ್ಪಿದೆವು. ಇದು ಶುದ್ಧ ಮೌಢ್ಯವೆಂದು ಆಮೇಲೆ ನನಗೆ ತಿಳಿಯಿತು.

* * *

ನನ್ನ ಹೆಂಡತಿ ಮಕ್ಕಳು ಎಂಥ ಬಟ್ಟೆ ಬರೆ ಹಾಕಬೇಕೋ, ಹೇಗೆ ಉಡಿಗೆ ತೊಡಿಗೆ ತೊಡಬೇಕೋ ನಾನೇ ನಿರ್ಧಾರ ಮಾಡಿದೆ. ದಕ್ಷಿಣಾಫ್ರಿಕಾ ದಲ್ಲಿ ಬಂದು ಕಾಥೆವಾಡೀ ಬನಿಯಾಗಳೆನಿಸಿಕೊಳ್ಳಬೇಕೆ? ನನಗದು ಇಷ್ಟ ವಿರಲಿಲ್ಲ. ಆಗ ಭಾರತೀಯರಲ್ಲಿ ಪಾರ್ಸೀ ಜನರೆ ಮುಂದಾಳುಗಳು. ಎಲ್ಲರಿ ಗಿಂತ ಅವರೇ ಹೆಚ್ಚು ನಾಗರಿಕರೆಂದು ಅನ್ನುತ್ತಿದ್ದರು. ಪೂರಾ ಇಂಗ್ಲಿಷ್ ವೇಷ ಸಾಧ್ಯವಲ್ಲದಿದ್ದರೆ ಪಾರ್ಸೀ ರೀತಿಯಾದರೂ ಸರಿ ಎಂದು ಅದನ್ನೆ ನಾವು ಅನುಸರಿಸುತ್ತಿದ್ದವು. ನನ್ನ ಹೆಂಡತಿಗೆ ಪಾರ್ಸೀ ಸೀರೆ, ಮಕ್ಕಳಿಗೆ ಪಾರ್ಸೀ ಕೋಟ, ಪಾರ್ಸೀ ಷರಾಯಿ ಧಾರಣೆ ಮಾಡಿಸಿದೆ. ಕಾಲಿಗೆ ಜೋಡು, ಕಾಲುಚೀಲ ಇಲ್ಲದೆ ಸಾಧ್ಯವಿರಲಿಲ್ಲ. ಈ ಪದ್ಧತಿ ರೂಢಿಯಾಗಲು ನನ್ನ ಹೆಂಡ ತಿಗೂ ಮಕ್ಕಳಿಗೂ ಬಹು ಕಾಲ ಹಿಡಿಯಿತು. ಜೋಡಿನಿಂದ ಅವರಿಗೆ ಕಾಲು ಕಟ್ಟಿದಂತಾಗುತ್ತಿತ್ತು. ಬೆವರಿನಿಂದ ಕಾಲುಚೀಲ ಹೊಲಸು ನಾರುತ್ತಿತ್ತು. ಬೆರಳು ಪದೇ ಪದೇ ಹುಣ್ಣಾಗುತ್ತಿದ್ದವು. ಏನೇ ಆಗಲಿ, ಅದಕ್ಕೆ ಏನೋ ಒಂದು ಸಮಾಧಾನ ಹೇಳುತ್ತಿದ್ದೆ. ಈ ಉತ್ತರಗಳಿಂದ ಅವರಿಗೇನೂ ಸಮಾ ಧಾನವಾಗುತ್ತಿರಲಿಲ್ಲವಾಗಲಿ, ನನ್ನ ಯಜಮಾನಿಕೆಗೆ ತಲೆಬಾಗುತ್ತಿದ್ದರು. ವಿಧಿಯಿಲ್ಲದೆ ಈ ವೇಷದ ಬದಲಾವಣೆಗೆ ಒಪ್ಪಿಕೊಂಡರು. ಅದೇ ನಿರುಪಾಯ ರೀತಿಯಲ್ಲಿ ಊಟಕ್ಕೆ ಚಾಕು ಚಮಚ್ಯಗಗಳನ್ನೂ ಬಳಸಿದರು. ನನಗೆ ಈ ನಾಗರಿಕತಾ ವ್ಯಾಮೋಹ ತೀರಿದ ಮೇಲೆ ಅವನ್ನೆಲ್ಲಾ ಬಿಟ್ಟುಬಿಟ್ಟರು.

ದರ್ಬಾನಿನಲ್ಲಿ ನಾನು ವಕೀಲಿ ಮಾಡುತ್ತಿದ್ದೆ. ಆಗ ನಮ್ಮ ಗುಮಾಸ್ತ ರೆಷ್ಟೋ ಜನ ನಮ್ಮ ಮನೆಯಲ್ಲೇ ವಾಸವಾಗಿದ್ದರು. ಅವರಲ್ಲಿ ಹಿಂದೂ ಗಳೂ ಇದ್ದರು, ಕ್ರಿಸ್ತಾನರೂ ಇದ್ದರು. ಅವರನ್ನೆಲ್ಲ ನಮ್ಮ ಕುಟುಂಬದವ ರಂತೆಯೇ ನಡಸಿಕೊಂಡಿದೇನೆ. ಹಾಗೆ ಅವರನ್ನು ನಡಸಿಕೊಳ್ಳುವುದರಲ್ಲಿ ಎಷ್ಟೋ ಸಲ ನನ್ನ ಹೆಂಡತಿ ಅಡ್ಡಿ ನಿಂತು, ನಮ್ಮ ನಮ್ಮಲ್ಲಿ ವಿರಸ ಸುಳಿದಿದೆ.

ನಾವಿದ್ದ ಮನೆ ಇಂಗ್ಲಿಷ್ ರೀತಿಯದು. ಆ ಮನೆಗಳಲ್ಲಿ ಕೊಳಕು ನೀರು ಹೊರಗೆ ಹೋಗಲು ಕೋಣೆ ಕೋಣೆಗೂ ತೂಬು ಇರುವುದಿಲ್ಲ. ಪ್ರತಿಯೊಂದು ಕೋಣೆಗೂ ಮೂತ್ರವಿಸರ್ಜನೆಗಾಗಿ ಹೊರ-ಪಾತ್ರೆಗಳನ್ನು ಇಡುತ್ತಿದ್ದರು. ಇದನ್ನು ಆಳು ಇಟ್ಟು ಚೊಕ್ಕಟ ಮಾಡಿಸುತ್ತಿರಲಿಲ್ಲ. ನಾನೋ ಕಸ್ತೂರಿಬಾಯಿಯೋ ತೊಳೆದು ಚೊಕ್ಕಟಮಾಡುತ್ತಿದ್ದೆವು. ಹಳಬರಾಗಿ ಪಳಗಿ ಹೋದ ಗುಮಾಸ್ತರು ತಮ್ಮ ಕೋಣೆಯ ಪಾತ್ರೆಗಳನ್ನು ತಾವೇ ತೊಳೆಯುತ್ತಿದ್ದರು.

ಗುಮಾಸ್ತರಲ್ಲಿ ಒಬ್ಬ ಹೊಸಬ. ಅವನು ಕ್ರಿಸ್ತಾನ; ಪಂಚಮ ಜಾತಿಯಿಂದ ಕ್ರಿಸ್ತಾನನಾದವನು.

ಅವನ ಕೋಣೆಯ ಪಾತ್ರೆ ತೊಳೆಯುವುದು ನಮ್ಮ ಪಾಲಿಗೆ ಬಿತ್ತು. ಉಳಿದವರ ಕೋಣೆಯ ಪಾತ್ರೆಗಳನ್ನು ನನ್ನ ಹೆಂಡತಿ ತೊಳೆದಳು. ಆದರೆ ಪಂಚಮನಾಗಿದ್ದವನ ಪಾತ್ರೆ ತೊಳೆಯುವುದೆಂದರೆ, ಅಲ್ಲಿಗೆ ಮಿತಿ ದಾಟಿದಂತಾಯಿತು. ಜಗಳವೆ ಆಯಿತು ನಮ್ಮಿಬ್ಬರಿಗೂ. ಅವನ ಪಾತ್ರೆಯನ್ನು ನಾನು ತೊಳೆವುದಂತೂ ಆಕೆಗೆ ಸಹಿಸಲಿಲ್ಲ. ತಾನು ತೊಳೆವುದಕ್ಕೆ ಇಷ್ಟವಿಲ್ಲ.

ಕಸ್ತೂರಿಬಾಯಿ ನನ್ನನ್ನು ಆಕ್ಷೇಪಿಸಿದ ಆ ದೃಶ್ಯ ಇವೊತ್ತಿಗೂ ನನಗೆ ನೆನಪಿದೆ. ಕೋಪದಿಂದ ಆಕೆಯ ಕಣ್ಣು ಕೆಂಪೇರಿತ್ತು. ಕೆನ್ನೆಯ ಮೇಲೆ ಮುತ್ತಿನ ಸರದ ಹಾಗೆ ಕಣ್ಣೀರು ಹನಿಹನಿಯಾಗಿ ಉದುರುತ್ತಿತ್ತು. ಆ ಪಾತ್ರೆಯನ್ನು ಕೈಯಲ್ಲಿ ಹಿಡಿದು ಮಹಡಿ ಮೆಟ್ಟಿಲು ಇಳಿಯುತ್ತಿದ್ದಳು.

ನಾನೋ ತುಂಬಾ ನಿಷ್ಠುರ ಕಾರುಣ್ಯದ ಗಂಡ. ಆಕೆಗೆ ಬುದ್ಧಿ ಕಲಿಸುವ ಗುರು ನಾನು ಎಂದು ನನ್ನ ಭಾವನೆ. ನನ್ನ ಕುರುಡು ಪ್ರೀತಿಯಿಂದ ಆಕೆಗೆ ಬಲು ತೊಂದರೆ ಕೊಟ್ಟೆ. ಆ ಪಾತ್ರೆಯನ್ನು ಹೀಗೆ ಅರೆಬರೆ ಮನಸ್ಸಿನಿಂದ ತಂದರೆ ನನಗೆ ತೃಪ್ತಿಯಿಲ್ಲ. ಸಂತೋಷದಿಂದ ಆ ಕೆಲಸ ಮಾಡಬೇಕು. ಆದ್ದರಿಂದ 'ಇಂಥ ಹುಚ್ಚಾಟವನ್ನು ನನ್ನ ಮನೆಯಲ್ಲಿ ಸಹಿಸಲಾರೆ' ಎಂದು ಗದರಿಸಿದೆ.

ಈ ಮಾತು ಅಂಬಿನಂತೆ ಆಕೆಯನ್ನು ಚುಚ್ಚಿದವು.

ಆಕೆಯೂ ಗಟ್ಟಿಯಾಗಿಯೇ ಬದಲು ಹೇಳಿದಳು: ನಿಮ್ಮ ಮನೆಯಲ್ಲಿ ನೀವೇ ಇದ್ದುಕೊಳ್ಳಿ. ನಾನೆಲ್ಲಾದರೂ ಹೊರಟುಹೋಗುತ್ತೇನೆ.

ನಾನು ಮೈಮರೆತೆ. ಕನಿಕರದ ಚಿಲುಮೆ ಬತ್ತಿಹೋಯಿತು. ಆ ದಿಕ್ಕಿಲ್ಲದ ಹೆಂಗಸನ್ನು ರಟ್ಟೆಹಿಡಿದು ಬೀದಿಗೆಳೆದು ತಂದೆ. ಮೆಟ್ಟಲಿಗೆ ಇದಿರಾಗಿ ಬೀದಿಯ ಬಾಗಿಲು. ಬಾಗಿಲು ತೆರೆದು ಆಕೆಯನ್ನು ಹೊರಗೆ ದಬ್ಬಬೇಕು. ಆಕೆಯ ಕೆನ್ನೆಯ ಮೇಲೆ ಕಣ್ಣೀರು ಧಾರೆಯಾಗಿ ಹರಿಯಿತು.

ಆಕೆ ಅಳುತ್ತ ಅಳುತ್ತ "ನಿಮಗೇನು ನಾಚಿಕೆಯಿಲ್ಲವೆ? ಮೈಮೇಲೆ ಎಚ್ಚರ ಕೊಂಚವೂ ಬೇಡವೆ? ನಾನೆಲ್ಲಿಗೆ ಹೋಗಲಿ? ಇಲ್ಲೇನು ನನ್ನ ತಂದೆತಾಯಿ ಇದಾರೆಯೆ? ನಿಮ್ಮ ಕೈಹಿಡಿದಿದ್ದಕ್ಕೆ ಸಾರ್ಥಕವಾಯಿತು. ನೀವು ಕೊಟ್ಟ ಕಷ್ಟವೆಲ್ಲಾ ಸೈರಿಸಿಕೊಂಡು ನೀವು ಹೊಡೆದ ಹೊಡೆತಗಳನ್ನೆಲ್ಲಾ ತಿನ್ನಬೇಕಲ್ಲವೆ ನಿಮ್ಮನ್ನು ಮದುವೆಯಾದ್ದಕ್ಕೆ? ದಮ್ಮಯ್ಯ, ಪುಣ್ಯ ಬಂದೀತು ನಿಮಗೆ—ಬಾಗಿಲು ಮುಚ್ಚಿ ಮರ್ಯಾದೆ ಉಳಿಸಿಕೊಳ್ಳಿ. ಬೀದಿ ಜನ ನಮ್ಮ ಜಗಳವನ್ನು ನೋಡಿಗೀಡಿಯಾರು!" ಎಂದಳು.

ಮುಖದಲ್ಲಿ ಗಾಂಭೀರ್ಯ ತೋರಿಸಿದರೂ ಒಳಗೊಳಗೆ ತುಂಬಾ ನಾಚಿಕೆ ನನಗೆ. ಬೀದಿ ಬಾಗಿಲು ಮುಚ್ಚಿದೆ. ನನ್ನನ್ನು ಬಿಟ್ಟು ಹೋಗುವುದು ಕಸ್ತೂರಿಬಾಯಿಗೆ ಸಾಧ್ಯವಿರದಿದ್ದರೆ ನನಗೂ ಅವಳನ್ನು ಬಿಡುವುದು ಸಾಧ್ಯವಿರಲಿಲ್ಲ. ಇಬ್ಬರ ನಡುವೆ ಎಷ್ಟೋ ವಿರಸ ಸುಳಿದಿವೆ. ಆದರೆ ಕೊನೆಗೆ ಎಲ್ಲಾ ಸರಸ—ಸಮಾಧಾನ. ತನ್ನ ಅಸಾಧಾರಣ ಸಹನೆಯಿಂದ, ಕೊನೆಗೆ ಕಸ್ತೂರಿಬಾಯಿಯೇ ಗೆದ್ದಿದಾಳೆ.

*　　*　　*

ನನ್ನ ಹಾಗೆ ಹೆಂಡತಿಗೆ ಕಷ್ಟವನ್ನು ಕೊಟ್ಟವರಿಲ್ಲ. ಅದರಲ್ಲೆಲ್ಲ ಔಚಿತ್ಯಕ್ಕಿಂತ ಅಧಿಕಾರವೇ ಬಲ. ದಾಂಪತ್ಯದಲ್ಲಿ ಲೋಪವೆಲ್ಲ ನನ್ನದು. ಆದರೆ ಕಷ್ಟ ಅನುಭವಿಸುವುದು ಮಾತ್ರ ಆಕೆಯದು.

ಆಕೆಗೆ ಒಂದು ದೊಡ್ಡ ಗುಣವಿದೆ. ಧಾರಾಳವಾಗಿದೆ ಆ ಗುಣ. ಸಾಧಾರಣವಾಗಿ ಹಿಂದೂ ಗರತಿಯರೆಲ್ಲರಲ್ಲೂ ಆ ಗುಣ ಕೊಂಚಮಟ್ಟಿಗೆ ಇದ್ದೇ ಇರುತ್ತದೆ. ಇಷ್ಟಪಟ್ಟೋ ಇಷ್ಟವಿಲ್ಲದೆಯೋ, ತಿಳಿದೋ ತಿಳಿಯದೆಯೋ, ನನ್ನ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟು ನನ್ನನ್ನು ಹಿಂಬಾಲಿಸುವುದೇ ತನ್ನ ಭಾಗ್ಯವೆಂದು ತಿಳಿದಿದಾಳೆ. ನಮ್ಮಿಬ್ಬರ ಬುದ್ಧಿಯ ಮಟ್ಟದಲ್ಲಿ ಬೇಕಾದಷ್ಟು

ಅಂತರವಿದೆ. ಆದರೂ ನಮ್ಮ ದಾಂಪತ್ಯಜೀವನ ತೃಪ್ತಿಪೂರ್ಣ, ಸುಖಮಯ, ಪ್ರಗತಿಪರ ಎಂದು ನನಗೆ ಯಾವಾಗಲೂ ಅನಿಸಿದೆ.

* * *

ದಕ್ಷಿಣ ಆಫ್ರಿಕಾದಲ್ಲಿ :

ಎಷ್ಟೇ ಜನ ಇರಲಿ, ಸತ್ಯಾಗ್ರಹ ಮಾಡುವುದು ಎಂದು ನಿರ್ಧರವಾಯಿತು. ಹೆಂಗಸರನ್ನು ಸತ್ಯಾಗ್ರಹಕ್ಕೆ ಕರೆಯಲು ತೀರ್ಮಾನಿಸಿದೆವು ಆ ಸಲ. ಟಾಲ್‌ಸ್ಟಾಯ್ ಫಾರಂನ ಸೋದರಿಯರೆಲ್ಲಾ ಸಮರದಲ್ಲಿ ಧುಮುಕಿದರು.

ಫೀನಿಕ್ಸ್‌ಗೆ ಬಂದೆ. ಅಲ್ಲಿನ ಸೋದರಿಯರೊಡನೆ ಮಾತಾಡಿದೆ. ನನ್ನ ಹೆಂಡತಿಯೊಡನೆ ಪ್ರಸ್ತಾಪವನ್ನೇ ಮಾಡಬಾರದೆಂದು ನಿಶ್ಚಯಿಸಿದ್ದೆ. ಏನು ಪ್ರಯೋಜನ? ನಾ ಹೇಳಿದ ಮಾತಿಗೆ ಆಕೆ ಬೇಡವೆನ್ನುತ್ತಿರಲಿಲ್ಲ. ನಾ ಹೇಳಿದ್ದಕ್ಕೆ ಒಪ್ಪಿದರೆ, ಅದಕ್ಕೆ ಎಷ್ಟು ಬೆಲೆ ಕೊಡಬೇಕೋ ಅರ್ಥವಾಗುವಂತಿಲ್ಲ. ಇಂಥ ಗಹನ ವಿಚಾರದಲ್ಲಿ ಹೆಂಡತಿ ತನ್ನ ಮನಸ್ಸಿಗೆ ಬಂದಂತೆ ಮಾಡಲಿ ಎಂದು ಗಂಡ ಸುಮ್ಮನಿರಬೇಕು. ಏನೂ ಮಾಡದೆ ಉದಾಸೀನವಾಗಿದ್ದರೂ ಖತಿಗೊಳ್ಳಬಾರದು.

ಉಳಿದವರೊಡನೆ ಈ ವಿಷಯ ಮಾತಾಡಿದೆ. ಅವರೆಲ್ಲರೂ ಶತಾಯುಗತಾಯು ಸಿದ್ಧವಾದರು.

ಕಸ್ತೂರಿಬಾಯಿ ಈ ಮಾತುಕತೆಗಳನ್ನೆಲ್ಲ ಮರೆಗೆ ನಿಂತು ಕೇಳುತ್ತಿದ್ದಳು. "ನನಗೇಕೆ ಈ ವಿಷಯ ಹೇಳುವುದಿಲ್ಲ? ಸೆರೆಮನೆಗೆ ನಾ ಬರಬಾರದೆ? ನನಗೆ ಅಷ್ಟು ಯೋಗ್ಯತೆಯಿಲ್ಲವೆ? ಉಳಿದವರನ್ನೆಲ್ಲಾ ನೀವು ಆ ದಾರಿಗೆ ಕರೆಯುತ್ತಾ ಇದೀರಿ. ನಾನೂ ಆ ದಾರಿ ತುಳಿಯಬಯಸುತ್ತೇನೆ" ಎಂದಳು.

ನಾನು ಹೇಳಿದೆ : 'ನಿನಗೆ ನೋವುಂಟುಮಾಡಿಯೇನೆ ನಾನು? ನಿನ್ನಲ್ಲಿ ನನಗೆ ಅಪನಂಬಿಕೆಯಿಲ್ಲ. ನೀನು ಸೆರೆಗೆ ಹೋದರೆ ನನಗೆ ಬಲು ಸಂತೋಷವಾದೀತು. ಆದರೆ ನನಗಾಗಿ ನೀನು ಹೋಗಬಾರದು. ಇಂಥ ವಿಷಯಗಳಲ್ಲಿ ಪ್ರತಿಯೊಬ್ಬರೂ ತಮ್ಮ ತಮ್ಮ ಶಕ್ತಿ ಧೈರ್ಯಗಳಿಂದ ಕೆಲಸ ಮಾಡಬೇಕು. ನಾನು ಕೇಳಿದರೆ, ನನ್ನ ಮಾತಿಗಾದರೂ ನೀನು ಸೆರೆಗೆ ಹೋದೀಯೆ.

ಆಮೇಲೆ ಕಛೇರಿಯಲ್ಲಿ ನಡುಗಿದರೆ, ಸೆರೆಯಲ್ಲಿ ಕಷ್ಟಕ್ಕೆ ಹೆದರಿದರೆ, ನಿನ್ನ ತಪ್ಪು ಎನ್ನಲಾರೆನಾಗಲಿ ನನ್ನ ಸ್ಥಿತಿ ಏನಾದೀತು? ತರುವಾಯ ನಿನಗೆ ನಾನು ಹೇಗೆ ಆಶ್ರಯ ಕೊಡಲಿ? ಜಗತ್ತಿಗೆ ಹೇಗೆ ಮೋರೆ ತೋರಿಸಲಿ? ಇಂಥ ಹಲವು ಹೆದರಿಕೆಯಿಂದ ನೀನು ಸೆರೆಗೆ ಬಾ ಎಂದು ಕರೆಯಲಿಲ್ಲ, ಅಷ್ಟೆ.'

'ಒಂದು ವೇಳೆ ಸೆರೆಗೆ ಬಂದು, ಅಲ್ಲಿನ ಕಷ್ಟ ತಡೆಯಲಾರದೆ ಕ್ಷಮೆ ಬೇಡಿ ಬಂದುದಾದರೆ ನನ್ನನ್ನು ನೀವು ಕೊನೆತನಕ ಕೈ ಬಿಡಬಹುದು; ಪರಿತ್ಯಾಗ ಮಾಡಬಹುದು. ನೀವೂ ನನ್ನ ಮಕ್ಕಳೂ ಸೆರೆಮನೆಯ ಕಷ್ಟ ಸಹಿಸಬಹುದಂತೆ, ನಾನು ಸೈರಿಸಲಾರೆನೆ? ನಾನೀ ಸಮರಕ್ಕೆ ಬಂದೇ ಬರುತ್ತೇನೆ.'

'ಯೋಚನೆ ಮಾಡು. ನೀನು ನನ್ನ ಸ್ವಭಾವ ಬಲ್ಲೆ. ನನ್ನ ಪರತತ್ತ್ವ ಗೊತ್ತು. ಈಗಲೂ ಚೆನ್ನಾಗಿ ಯೋಚನೆ ಮಾಡು; ಮಾಡಿ, ಚಳುವಳಿಗೆ ಸೇರಬಾರದೆಂಬ ನಿರ್ಧಾರಕ್ಕೆ ಬಂದರೆ, ಬೇಡ. ಅದರಲ್ಲಿ ಅವಮಾನವೇನೂ ಇಲ್ಲ. ಗೊತ್ತಿರಲಿ.'

'ನನಗೇನೂ ಯೋಚನೆ ಮಾಡುವುದೇ ಇಲ್ಲ. ನಾನು ಸಂಪೂರ್ಣವಾಗಿ ಮಾಡಿದೇನೆ.'

* * * *

ದಕ್ಷಿಣ ಆಫ್ರಿಕಾದಲ್ಲಿ ನನ್ನ ಕೆಲಸ ಮುಗಿಯಿತು.

ಭಾರತಕ್ಕೆ ಹಿಂದಿರುಗಿ ಹೊರಟಾಗ ನೇಟಾಲಿನ ಜನ ನನ್ನನ್ನು ಪ್ರೀತಿ ಸುಧೆಯಲ್ಲಿ ಮುಳುಗಿಸಿದರು. ಬೀಳುಕೊಳಮೆಯ ಸಭೆ ಊರೂರಿಗೂ ನಡೆದವು. ಅಮೂಲ್ಯಾಭರಣಗಳನ್ನು ಕಾಣಿಕೆಯಾಗಿ ಮಳೆಗರೆದರು ಜನ.

ಈ ಉಡುಗೊರೆಯನ್ನು ನಾನು ಹೇಗೆ ಪರಿಗ್ರಹಿಸಲಿ? ಇತ್ತ ಕಾಣಿಕೆಗಳನ್ನು ತೆಗೆದುಕೊಂಡು ಅತ್ತ ನಾನು ಅನಪೇಕ್ಷನೆನ್ನುವುದು ಹೇಗೆ?

ಉಡುಗೊರೆ ಕೊಟ್ಟ ದಿನ ರಾತ್ರಿ ನನಗೆ ನಿದ್ದೆಯೆ ಇಲ್ಲ. ಕೋಣೆಯಲ್ಲಿ ಶತಪಥ ಹಾಕಿದೆ. ಮನಸ್ಸು ತುಂಬಾ ಕಳವಳಗೊಂಡಿತ್ತು. ಸಾವಿರಾರು ರೂಪಾಯಿನ ಒಡವೆ. ಇಟ್ಟುಕೊಳ್ಳುವುದೂ ಕಷ್ಟ, ಬಿಡುವುದೂ ಕಷ್ಟ.

ಕಡೆಗೆ ಇದನ್ನು ತ್ಯಾಗ ಮಾಡಲು ನಿರ್ಧರಿಸಿದೆ. ಅವನ್ನು ಒಂದು ನಿಧಿಯಾಗಿ ಮಾಡಿ ಕಾಗದಪತ್ರ ಬರೆದೆ

ಈ ಮಾತಿಗೆ ನನ್ನ ಹೆಂಡತಿಯನ್ನು ಒಪ್ಪಿಸುವುದು ಕಷ್ಟವಾಯಿತು. ಮಕ್ಕಳೇನೋ ಒಡನೆಯೇ ಒಪ್ಪಿಕೊಂಡರು 'ನಿಮ್ಮ ತಾಯನ್ನೂ ಒಪ್ಪಿಸುತ್ತೀರೋ' ಎಂದೆ.

ಬಾಯಲ್ಲಿ ಹೇಳಿದಷ್ಟು ಸುಲಭವಾಗಿರಲಿಲ್ಲ ಆ ಕೆಲಸ.

'ನಿಮಗೂ ನಿಮ್ಮ ಮಕ್ಕಳಿಗೂ ಒಡವೆ ಬೇಡವಾದಾವು. ಅವರೇನು ನೀವು ಹೇಳಿದಂತೆ ಕುಣಿಯುತ್ತವೆ. ನನಗೆ ಒಡವೆ ಬೇಡ ಎಂದೀರಿ ನೀವು. ನಾಳೆ ಸೊಸೆಯರು ಬಂದರೆ ಅವರಿಗೋ? ನಾಳೆ ಏನೋ ಯಾರು ಬಲ್ಲರು? ಪ್ರೀತಿಯಿಂದ ಕೊಟ್ಟ ಒಡವೆ; ಅವನ್ನೇಕೆ ಕೊಡಲಿ?' ಎಂದಳು ಕಸ್ತೂರಿ ಬಾಯಿ.

ಆ ಉಡುಗೊರೆಯಲ್ಲಿ ಒಂದು ಬಂಗಾರದ ಸರವಿತ್ತು. ಐವತ್ತು ಗಿನಿಗಳದು. ಅದು ಕಸ್ತೂರಿಬಾಯಿಗಾಗಿ ಕೊಟ್ಟದ್ದು.

'ನನ್ನ ಒಡವೆಗಳನ್ನಂತೂ ಇಲ್ಲದ ಹಾಗೆ ಮಾಡಿದಿರಿ. ಅವು ಇರುವ ತನಕ ನನಗೆ ಉಳಿಗಾಲವಿರಲಿಲ್ಲ. ನಾಳೆ ನೀವು ಸೊಸೆಯರಿಗೆ ಒಡವೆ ತಂದು ಕೊಟ್ಟೀರಾ? ಈಗಿಂದ ಮಕ್ಕಳನ್ನು ವೈರಾಗಿಗಳಾಗಿ ಮಾಡುತ್ತಿದೀರಿ. ಊಹೂಂ. ಒಡವೆಗಳನ್ನು ಕೊಡುವುದಿಲ್ಲ. ಅದಿರಲಿ, ನನ್ನ ಸರದ ಮೇಲೆ ನಿಮ್ಮದೇನು ಹಕ್ಕು?' ಎಂದಳು.

'ಆ ಸರ ಕೊಟ್ಟದ್ದು ನೀನು ಮಾಡಿದ ಸೇವೆಗೋ ನಾನು ಮಾಡಿದ ಸೇವೆಗೋ?' ಎಂದು ಕೇಳಿದೆ.

'ಸರಿಯೆ. ನೀವು ಮಾಡಿದ ಸೇವೆ ನಾನು ಮಾಡಿದ ಹಾಗೇ. ಹಗಲೂ ಇರುಳೂ ನಿಮಗಾಗಿ ದುಡಿದುಡಿದು ಸೊಪ್ಪಾಗಿದೇನೆ. ಅದು ಸೇವೆಯಲ್ಲವೆ? ಅವರಿವರನ್ನು ತಂದು ತಲೆಯ ಮೇಲೆ ಕೂಡಿಸಿ ಎಲ್ಲರ ಚಾಕರಿಯನ್ನೂ ಮಾಡಿಸಿದಿರಲ್ಲ. ಎಷ್ಟು ಕಣ್ಣೀರು ಸುರಿಸಿದೆನೋ?'

ಈ ಮಾತೆಲ್ಲಾ ಮುಳ್ಳಿನಂತೆ ಚುಚ್ಚಿದವು. ಆದರೂ ಒಡವೆಗಳನ್ನೆಲ್ಲ ಕೊಟ್ಟುಬಿಡಲು ನಾನು ನಿರ್ಧರಿಸಿದ್ದೆ. ಕಸ್ತೂರಿಬಾಯಿಯ ಒಪ್ಪಿಗೆಯನ್ನೂ ಪಡೆದೆ.

* * * *

ನಾನು ಹಾಲು ಕುಡಿಯುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದೆ.

ಹಾಲು ಕರೆವಾಗ ಗೋವಳರು ಆಕಳಿಗೂ ಎಮ್ಮೆಗೂ ಚಿತ್ರಹಿಂಸೆ ಮಾಡುತ್ತಾರೆ. ಇದು ನನಗೆ ಗೊತ್ತಾದಂದಿನಿಂದ ಹಾಲನ್ನು ಕಂಡರೆ ನನಗೆ ಅಸಹ್ಯ ಹುಟ್ಟುತ್ತಿತ್ತು. ಇದಲ್ಲದೆ ಹಾಲು ಮನುಷ್ಯರಿಗೆ ಸಹಜ ಆಹಾರವಲ್ಲ ವೆಂದು ನನ್ನ ಅಭಿಪ್ರಾಯ.

ಆದ್ದರಿಂದ ಹಾಲನ್ನು ಸಂಪೂರ್ಣವಾಗಿ ಬಿಟ್ಟಿದ್ದೆ.

ಒಂದು ಸಲ ನಾನು ಬಹಳ ಕಾಯಿಲೆ ಬಿದ್ದೆ. ಮೃತ್ಯು ಸಮ್ಮುಖದಲ್ಲಿ ನಿಂತಿದ್ದೆ. ಮೊದಲೇ ಮೈ ಚೆನ್ನಾಗಿರಲಿಲ್ಲ. ಅವತ್ತು ಯಾವುದೋ ಹಬ್ಬ. ಊಟ ಬೇಡವೆಂದು ಹೇಳಿದರೂ ಕಸ್ತೂರಿಬಾಯಿ ನನ್ನ ಮೂಗಿಗೆ ತುಪ್ಪ ಹಚ್ಚಿದಳು. ಗೋಧಿನುಚ್ಚಿನ ಸೀ ಪೊಂಗಲು ಮಾಡಿ, ಬಟ್ಟಲು ತುಂಬಾ ಹೆಸರುಬೇಳೆ ಪಾಯಸ ಮಾಡಿ ತಂದಿಟ್ಟಳು. ಇವು ನನಗೆ ತುಂಬಾ ಇಷ್ಟ. ಅವಳಿಗೆ ಸಂತೋಷ, ನನಗೆ ರುಚಿ; ಕೊಂಚ ತಿಂದರಾಯಿತು, ಏನೂ ಆಗು ವುದಿಲ್ಲ ಎಂದು ತಿಂದೆ. ದುರ್ದೈವ ಕಾದಿತ್ತು. ಕೊಂಚವಲ್ಲ, ಹೊಟ್ಟೆ ತುಂಬಾ ತಿಂದೆ. ಯಮಧರ್ಮರಾಯನಿಗೆ ವೀಳ್ಯ ಕೊಟ್ಟು ಕರೆದಂತಾಯಿತು. ಒಂದೇ ಗಂಟೆ! ಆಮಶಂಕೆ ತೀಕ್ಷ್ಣವಾಗಿ ಕಾಣಿಸಿಕೊಂಡಿತು.

ಈ ಕಾಯಿಲೆ ಬಹು ದೀರ್ಘವಾಯಿತು. ಅದರಿಂದ ಆಸನ ದ್ವಾರ ನಾಜೋಕಾಗಿ ಹುಣ್ಣಾಗಿತ್ತು. ಮಲವಿಸರ್ಜನೆಯ ಕಾಲದಲ್ಲಿ ವಿಶೇಷ ನೋವಾಗುತ್ತಿತ್ತು. ಅದಕ್ಕೆ ಶಸ್ತ್ರಚಿಕಿತ್ಸೆ ಮಾಡಿದರೆ ಗುಣವೆಂದು ಡಾ. ದಲಾ ಲರು ಹೇಳಿದರು. ಆಯಿತು. ಗುಣವೂ ಆಯಿತು.

ಅವರಿಗೆ ಅಷ್ಟಕ್ಕೇ ತೃಪ್ತಿಯಾಗಲಿಲ್ಲ. 'ನೀವು ಹಾಲು ಕುಡಿಯದಿದ್ದರೆ ಮೊದಲಿನ ಹಾಗೆ ಆಗಲಾರಿರಿ' ಎಂದರು.

ನನ್ನ ಹಾಲಿನ ಕತೆಯನ್ನೆಲ್ಲ ಹೇಳಿ ಪ್ರತಿಜ್ಞೆಯನ್ನು ತಿಳಿಸಿದೆ.

ಕಸ್ತೂರಿಬಾಯಿ ನನ್ನ ಹಾಸಿಗೆ ಬಳಿ ನಿಂತು ಇದನ್ನೆಲ್ಲ ಕೇಳುತ್ತಿದ್ದಳು. 'ಹಾಗಾದರೆ ಮೇಕೆಯ ಹಾಲನ್ನು ಕುಡಿಯಲಿಕ್ಕೆ ನಿಮಗೆ ಯಾವ ಅಭ್ಯಂ ತರವೂ ಇರಲಾರದು' ಎಂದಳು. ವೈದ್ಯರೂ ಅದೇ ಪಲ್ಲವಿ ಹಾಡಿದರು.

ಮೇಕೆ ಹಾಲನ್ನು ಕುಡಿಯಲು ನಾನು ಒಪ್ಪಿದೆ.

* * *

ಕಸ್ತೂರಿ ಬಾಯಿಗೆ ಮೂರು ಸಲ ಕ್ರೂರ ಜಾಡ್ಯದಿಂದ ಗಂಡಾಂತರ ಬಂದಿತ್ತು. ಮೊದಲನೆ ಸಲ ಆಕೆಗೆ ನಿರಂತರ ರಕ್ತಸ್ರಾವ. ಅದಕ್ಕೆ ಶಸ್ತ್ರ ಚಿಕಿತ್ಸೆಯಾಯಿತು. ಆಕೆ ಧೀರೆಯಂತೆ ಅದನ್ನು ಸಹಿಸಿಕೊಂಡಳು. ಆದರೆ ಬರಬರುತ್ತ ಬಹಳ ನಿತ್ರಾಣವಾಗಿ ಗೋಮಾಂಸದ ಕಷಾಯ ಕೊಡದೆ ಆಕೆ ಬದುಕುವುದು ಸಾಧ್ಯವಿಲ್ಲವೆಂದು ವೈದ್ಯರು ಹೇಳಿದರು.

ನನಗೇನೋ ಮಾಂಸದ ವೈದ್ಯ ಇಷ್ಟವಿರಲಿಲ್ಲ. ಕಸ್ತೂರಿಬಾ ಸತ್ತರೂ ಸರಿಯೆ, ಆಕೆಗೆ ಮಾಂಸ ಕೊಡಿಸಲು ನಾ ಸಿದ್ಧನಿರಲಿಲ್ಲ. ವೈದ್ಯರೂ ಅವರ ಹೆಂಡತಿಯೂ ನನ್ನ ಗೆಳೆಯರು. ತುಂಬಾ ಒಳ್ಳೇ ಮನುಷ್ಯರು. ನನಗೆ ಬಹಳ ಉಪಕಾರಮಾಡಿದ್ದರು. ಆದರೆ ಅವರ ವೈದ್ಯನೀತಿಗೆ ತಲೆಬಾಗಲು ನಾನೊಪ್ಪಲಿಲ್ಲ.

ಆದರೂ ಕಸ್ತೂರಿಬಾ ಇಷ್ಟಪಟ್ಟರೆ ಆಗಬಹುದು ಎಂದೆ.

ಕಸ್ತೂರಿಬಾಗೆ ತೀರಾ ನಿಶ್ಶಕ್ತಿ. ಆಕೆಯ ಅಭಿಪ್ರಾಯ ಕೇಳುವುದೂ ಕಷ್ಟವಾಗಿತ್ತು. ಆದರೂ ಕರ್ತವ್ಯವೆಂದು ಆಕೆಯನ್ನು ಕೇಳಿದೆ.

ಆಕೆ 'ನಾನು ಮಾಂಸದ ಕಷಾಯ ಕುಡಿಯುವುದಿಲ್ಲ. ಈ ಪ್ರಪಂಚದಲ್ಲಿ ಮನುಷ್ಯಜನ್ಮ ಎತ್ತುವುದೇ ಒಂದು ಭಾಗ್ಯ. ನಿಮ್ಮ ತೊಡೆಯ ಮೇಲೆ ಹೀಗೇ ಸತ್ತೇನು; ಈ ಮೈಯನ್ನು ಮಾಂಸ ಸೇವನೆಯಿಂದ ಕಲುಷಗೊಳಿಸಲಾರೆ' ಎಂದಳು. ದೃಢವಾಗಿ ಹೇಳಿದಳು.

ವೈದ್ಯರದು ಒಂದೇ ಹಟ. ತಾನು ಔಷಧಿ ಕೊಡುವುದಾದರೆ ತನಗೆ ಇಷ್ಟಬಂದದ್ದನ್ನು ಕೊಡಬೇಕು. ಅದಕ್ಕೆ ಒಪ್ಪದಿದ್ದರೆ ನಿಮ್ಮ ಹೆಂಡತಿಯನ್ನು ಇಲ್ಲಿಂದ ಕರೆದುಕೊಂಡು ಹೋಗಿ ಎಂಬ ಹಟ.

ಕಸ್ತೂರಿಬಾಯಿಗೆ ಇದನ್ನು ತಿಳಿಸಿದೆ. ನನ್ನ ಅಭಿಪ್ರಾಯದಂತೆಯೇ ನಡೆಯುವ ಅಗತ್ಯವಿಲ್ಲವೆಂದು ಎಷ್ಟೋ ಹೇಳಿದೆ. ಎಷ್ಟೋ ಜನ ಹಿಂದೂಗಳು ಔಷಧಕ್ಕಾಗಿ ಮದ್ಯ ಮಾಂಸ ಸೇವನೆ ಮಾಡಿದ ಉದಾಹರಣೆಗಳನ್ನು ತಿಳಿಸಿದೆ. ಆದರೂ ಆಕೆ ಜುಮ್ಮೆನ್ನಲಿಲ್ಲ. "ಅದೆಲ್ಲಾ ಆಗದು. ಕೂಡಲೇ ಇಲ್ಲಿಂದ ನನ್ನನ್ನು ಕರೆದುಕೊಂಡು ಹೋಗಿ" ಎಂದಳು.

ನನಗೆ ಬಲು ಸಂತೋಷವಾಯಿತು. ಒಡನೆಯೇ ಅಲ್ಲಿಂದ ಹೊರಟೆವು. ಹೊರಗೆ ಜಡಿ ಮಳೆ. ರೈಲು ನಿಲುಮನೆ ಕೊಂಚ ದೂರವಾಗೇ

ಇತ್ತು. ನಮ್ಮ ಆಶ್ರಮ ಸೇರಬೇಕಾದರೆ ಡರ್ಬನಿನಿಂದ ಫೀನಿಕ್ಸ್‌ವರೆಗೆ ರೈಲಿನಲ್ಲಿ, ಅಲ್ಲಿಂದ ಎರಡೂವರೆ ಮೈಲಿ ಕಾಲುದಾರಿಯಲ್ಲಿ ಹೋಗಬೇಕು. ಈ ಕೆಲಸ ಗಂಡಾಂತರದ್ದು. ಆದರೆ ದೇವರ ಮೇಲೆ ಭಾರ ಹಾಕಿ ನಾನು ಹೊರಟೆ. ಫೀನಿಕ್ಸ್ ನಿಲ್ದಾಣಕ್ಕೆ ಒಂದು ಡೋಲಿ, ಒಂದು ಸೀಸೆ ಹಾಲು, ಒಂದು ಸೀಸೆ ನೀರು, ಡೋಲಿ ಹೊರಲು ಆರು ಜನ ಆಳುಗಳ ಸಮೇತ ಬರ ಬೇಕೆಂದು ವೆಸ್ಟ್‌ಗೆ ಮೊದಲೇ ಹೇಳಿಕಳುಹಿಸಿದೆ. ಕೂಡಲೆ ರೈಲಿಗೆ ಹೊರಡು ವಂತೆ ಒಂದು ರಿಕ್‌ಷಾ ತಂದು ಕಸ್ತೂರಿಬಾಯನ್ನು ಅದರಲ್ಲಿ ಕೂಡಿಸಿ, ಆ ಅಪಾಯ ಸ್ಥಿತಿಯಲ್ಲೇ ಹೊರಟೆ.

ಆಕೆಗೆ ಧೈರ್ಯ ಹೇಳಬೇಕಾಗಿರಲಿಲ್ಲ. ಆಕೆಯೇ 'ನನಗೇನೂ ಆಗು ವುದಿಲ್ಲ. ನೀವು ಯೋಚನೆ ಮಾಡಬೇಡಿ' ಎಂದು ಹೇಳಿ ನನ್ನನ್ನು ಸಂತೈಸಿದಳು.

ನಾವು ಫೀನಿಕ್ಸ್ ತಲಪಿದ ೨-೩ ದಿನದಲ್ಲಿ ಸ್ವಾಮಿಗಳೊಬ್ಬರು ನಮ್ಮ ಮನೆಗೆ ಬಂದರು. ವೈದ್ಯರ ಸಲಹೆ ಸ್ವೀಕರಿಸಿದನಲ್ಲ ಎಂದು ಅವರಿಗೆ ನಮ್ಮ ಮೇಲೆ ಕರುಣೆ. ನಮಗೆ ತಿಳಿಸಿ ಹೇಳಲು ಬಂದಿದ್ದರು. ಮನುಸ್ಮೃತಿಯ ಶ್ಲೋಕಗಳನ್ನು ಉದಾಹರಿಸಿ ಮಾಂಸಾಹಾರವು ಧರ್ಮವಿರುದ್ಧವಲ್ಲವೆಂದು ವಾದಿ ಸಿದರು. ಕಸ್ತೂರಿಬಾಯಿಯ ಇದಿರಿಗೇ ಅವರು ಈ ಚರ್ಚೆ ಮಾಡಿದ್ದು ನನಗೆ ಸರಿಬೀಳಲಿಲ್ಲ. ಈ ಶ್ಲೋಕಗಳು ಮೂಲಸ್ಮೃತಿಯವಲ್ಲ, ಹೊಸದಾಗಿ ಸೇರಿಸಿದ್ದು ಎಂಬವರು ಇದಾರೆ. ಹಾಗಲ್ಲವಿದ್ದರೂ ನನ್ನ ಅಭಿಪ್ರಾಯ ಸ್ವತಂತ್ರ ವಾದ್ದು. ಕಸ್ತೂರಿಬಾಯಿಯ ನಂಬಿಕೆ ಅಚಲವಾದ್ದು; ಅಲ್ಲಾಡಿಸುವ ಹಾಗೇ ಇರಲಿಲ್ಲ. ಆಕೆಗೆ ಶಾಸ್ತ್ರಪ್ರಮಾಣವೇನೂ ಗೊತ್ತಿಲ್ಲವಾದರೂ ತಲೆ ತಲಾಂತರದ ಸಂಪ್ರದಾಯವೇ ಆಕೆಗೆ ಪ್ರಮಾಣ.

ಕೊನೆಗೆ ಕಸ್ತೂರಿಬಾಯಿಯೇ ಚರ್ಚೆಯನ್ನು ಮುಕ್ತಾಯಗೊಳಿಸಿದಳು. ಆಕೆ ಹೇಳಿದಳು: 'ಸ್ವಾಮಿ ತಾವು ಏನೇ ಹೇಳಿ, ನನಗೆ ಮಾಂಸದ ಕಷಾಯ ಬೇಡ. ಅದನ್ನು ಕುಡಿದು ಗುಣ ಹೊಂದಲು ನನಗೆ ಇಷ್ಟವಿಲ್ಲ. ದಯೆ ಯಿಟ್ಟು ಇನ್ನು ನನ್ನ ತಲೆ ಚಿಟ್ಟು ಹಿಡಿಸಬೇಡಿ. ಇಷ್ಟವಿದ್ದರೆ ನಮ್ಮ ಯಜ

ಮಾನರಿದಾರೆ, ನುಕ್ಕಳಿದಾರೆ, ಚರ್ಚೆ ನಡೆಸಿ. ನನ್ನ ಮನಸ್ಸು ಮಾತ್ರ ಗಟ್ಟಿಯಾಗಿದೆ."

* * *

ಕೆಲವು ದಿನದಲ್ಲಿ ರಕ್ತಸ್ರಾವ ನಿಂತರೂ ಮತ್ತೆ ತಲೆದೋರಿ ರೋಗ ಮೊಂಡ ವ್ಯಾಧಿಯಾಯಿತು. ನನ್ನ ಚಿಕಿತ್ಸೆಯಲ್ಲಿ ಕಸ್ತೂರಿಬಾಯಿಗೆ ನಂಬಿಗೆ ಯಿರಲಿಲ್ಲ. ಹೊರಗಿನ ವೈದ್ಯ ಬಯಸಲಿಲ್ಲ. ಅಂತೂ ಇಂತೂ ಚಿಕಿತ್ಸೆಯೆಲ್ಲಾ ನಿಷ್ಪ್ರಯೋಜನವಾದವು. ಕಡೆಗೆ ಉಪ್ಪು ಬೇಳೆ ಬಿಡಬೇಕೆಂದು ಆಕೆಗೆ ನಾನು ಪಥ್ಯ ಹೇಳಿದೆ. ಎಷ್ಟೋ ಆಧಾರ ಸಹಿತ ತಿಳಿಸಿ ಹೇಳಿದೆ. ಆಕೆ ಒಪ್ಪ ಲಿಲ್ಲ, 'ನಿಮ್ಮನ್ನು ಬಿಡಿ ಎಂದರೆ ನೀವು ಉಪ್ಪು ಬೇಳೆ ಬಿಟ್ಟೀರಾ? ಬಿಡ ಲಾರಿರಿ' ಎಂದಳು. ನನ್ನನ್ನು ಪಂಥಕ್ಕೇ ಎಳೆದಂತಾಯಿತು. ಅದರಿಂದ ದುಃಖವೂ ಆಯಿತು, ಸಂತೋಷವೂ ಆಯಿತು.

'ನೀನು ತಪ್ಪು ತಿಳಿದಿದ್ದೀ. ವೈದ್ಯರು ನನಗೆ ಕಾಯಿಲೆ ಬಂದಾಗ ಹೀಗೆ ಹೇಳಿದ್ದರೆ, ಯಾವ ಪದಾರ್ಥದನ್ನೇ ಆಗಲಿ, ನಿರ್ಯೋಚನೆಯಿಂದ ಒಪ್ಪು ತ್ತಿದ್ದೆ. ಒಳ್ಳೇದು. ಈಗಲೂ ಇಪ್ಪೊತ್ತಿನಿಂದ ೧ ವರ್ಷದವರೆಗೆ ಉಪ್ಪನ್ನೂ ಬೇಳೆಗಳನ್ನೂ ಬಿಟ್ಟುಬಿಡುತ್ತೇನೆ. ನೀನು ಬಿಡು, ಬಿಡದಿರು. ಅದು ಬೇರೆ ಮಾತು.'

ಕಸ್ತೂರಿಬಾಯಿಗೆ ಸಿಡಿಲು ಬಡಿದಂತಾಯಿತು. ಬಹು ವ್ಯಾಕುಲದಿಂದ 'ದಮ್ಮಯ್ಯ, ಕ್ಷಮಿಸಿ, ನಿಮ್ಮ ಸ್ವಭಾವ ತಿಳಿದೂ ತಿಳಿದೂ ನಾನು ನಿಮ್ಮನ್ನು ರೇಗಿಸಬಾರದಾಗಿತ್ತು. ಉಪ್ಪು ಬೇಳೆ ನಾನು ಬಿಡುತ್ತೇನೆ. ನಿಮ್ಮ ಆಣೆ, ದೇವರಾಣೆ. ನಿಮ್ಮ ಮಾತನ್ನು ಹಿಂದಕ್ಕೆ ತೆಗೆದುಕೊಳ್ಳಿ. ಇದು ನನಗೆ ಕ್ರೂರ ಶಿಕ್ಷೆ' ಎಂದು ಅಂಗಲಾಚಿದಳು.

ನಾನು ಒಪ್ಪಲಿಲ್ಲ. ನಿಷ್ಫಲವೆಂದು ಆಕೆ ಮಾತು ನಿಲ್ಲಿಸಿದಳು. 'ನೀವು ಬಲು ಹಟಮಾರಿಗಳು. ಯಾರ ಮಾತನ್ನೂ ಕೇಳುವುದಿಲ್ಲ' ಎನ್ನುತ್ತ ತನ್ನ ಎದೆಯ ಬೆಂಕಿಯನ್ನು ಕಣ್ಣೀರಿನಲ್ಲಿ ಆರಿಸಿದಳು.

ಇದಾದ ಮೇಲೆ ಕಸ್ತೂರಿಬಾಯಿಗೆ ಬೇಗ ಗುಣವಾಯಿತು. *

* * *

---

*ಬಹು ಕಾಲದ ಮೇಲೆ ಈ ಸಂಗತಿಯನ್ನು ಗಾಂಧೀಜೀ ಕಸ್ತೂರಿಬಾಗೆ

ನನ್ನ ಹೆಂಡತಿಯೇ ನನಗ ಸರ್ವ ಸ್ತ್ರೀಲೋಕ; ಹೆಣ್ಣು ಜೀವದ ಪ್ರತಿನಿಧಿ. ಆಕೆಯನ್ನು ಅರ್ಥ ಮಾಡಿಕೊಂಡಾಗ ನನಗೆ ಇಡೀ ಹೆಣ್ಣು ಜಾತಿಯ ಮನಸ್ಸೇ ಅರ್ಥವಾಯಿತು....ನನ್ನ ಅನುಭವದ ಮಾತನ್ನೆ ಹೇಳುತ್ತೇನೆ: ಕಾಮದ ಕಣ್ಣಿಂದ ನನ್ನ ಹೆಂಡತಿಯನ್ನು ನೋಡಿದಷ್ಟು ದಿನ ಪರಸ್ಪರ ಜ್ಞಾನವಿರಲಿಲ್ಲ. ನಮ್ಮ ಅನುರಾಗ ಮೇಲು ಮಟ್ಟಕ್ಕೆ ಏರಲಿಲ್ಲ. ಪ್ರೀತಿಯಂತೂ ಯಾವಾಗಲೂ ಇತ್ತು: ಆದರೆ ನಾವು, ಅಲ್ಲ, ನಾನು ಸಂಯಮ ಕಲಿತಂತೆ ನಮ್ಮ ಮನಸ್ಸು ಹತ್ತಿರ ಹತ್ತಿರವಾದವು. ನನ್ನ ಹೆಂಡತಿಯಲ್ಲಿ ಸಂಯಮಕ್ಕೇನು ಕೊರತೆಯಿರಲಿಲ್ಲ; ತುಂಬಾ ಸಂಯಮವಿತ್ತು. ಎಷ್ಟೋ ಸಲ ತನ್ನ ನಿಗ್ರಹ ಬುದ್ಧಿ ತೋರಿಸುತ್ತಿದ್ದಳು; ಬೇಸರ ಪಟ್ಟುಕೊಳ್ಳುತ್ತಿದ್ದಳು; ಬೇಡ

---

ನೆನಪು ಕೊಟ್ಟರು. ರಾಜಕೋಟೆಯ ಪ್ರಕರಣದಲ್ಲಿ ಕಸ್ತೂರಿಬಾಗೆ ಗಾಂಧೀಜಿಯ 'ಪರಿತ್ಯಾಗ' ಸರಿಕಾಣಲಿಲ್ಲ. ಅವರನ್ನು ಎಳೆ ಮಗುವಿನಂತೆ ಪ್ರಶ್ನಿಸಿದಳು. ಮಹಾದೇವಭಾಯಿ ಅದನ್ನು ವರ್ಣಿಸಿದಾರೆ.

ಗಾಂಧೀಜೀ ಕೇಳಿದರು: "ಆಫ್ರಿಕಾದಲ್ಲಿ ನಿನಗೆ ಕಾಯಿಲೆಯಾಗಿ, ಇನ್ನೇನು ಈಗಲೋ ಆಗಲೋ ಅನ್ನುವ ಹಾಗಾಗಿತ್ತು. ಆಗ ಮಾಂಸದ ಸಾರು ಕೊಡದಿದ್ದರೆ ನೀನು ಉಳಿಯುವುದು ಸಾಧ್ಯವಿಲ್ಲವೆಂದು ವೈದ್ಯರು ಹೇಳಿದ್ದು ನೆನಪಿದೆಯೆ?"

"ಹೂಂ ನೆನಪಿದೆ."

"ನೆನಪಿದೆ ತಾನೆ. ನಿನ್ನಿಷ್ಟ ಬಂದ ಹಾಗೆ ಮಾಡು ಎಂದು ನಾನು ಹೇಳಿದರೂ ಕೂಡ, ಸತ್ತರೂ ಚಿಂತೆಯಿಲ್ಲ, ಆ ಸಾರು ಕುಡಿಯುವುದಿಲ್ಲವೆಂದು ನೀನು ಹೇಳಿದೆ. ಅದೂ ನೆನಪಿದೆಯೇ?"

"ಹೂಂ"

"ಅದೇಕೆ ಗೊತ್ತೇ? ನಿನ್ನ ವಿಶ್ವಾಸ ಅಷ್ಟು ಅಚಲವಾಗಿತ್ತು. ದೇವರಿಗೆ ನೀನಿರುವುದು ಇಷ್ಟವಾದರೆ ಹೇಗಾದರೂ ಉಳಿಸಿಯೇ ಉಳಿಸುತ್ತಾನೆ; ಮಾಂಸ ಮುಟ್ಟಬಾರದೆಂಬ ನಿನ್ನ ಧರ್ಮ ಬಿಟ್ಟು, ವ್ರತಭಂಗ ಮಾಡಿ ಪ್ರಾಣ ಉಳಿಸಿಕೊಳ್ಳಬೇಕಾದುದೇನೂ ಅಗತ್ಯವಿರಲಿಲ್ಲವೆಂದು ನೀ ತಿಳಿದಿದ್ದೆ."

"ಹೌದು."

ವೆಂದು ನನ್ನನ್ನು ಇದಿರಿಸುತ್ತಿರಲಿಲ್ಲ. ಕಾಮಸುಖದಾಸೆ ಇದ್ದಷ್ಟು ದಿನವೂ ಆಕೆಗೇನೂ ಹಿತ ಮಾಡಲಾರದೆ ಹೋದೆ. ಸೇವೆ ಮಾಡಲಾರದಾದೆ. ಕಾಮದ ಬಾಳನ್ನು ಸುಟ್ಟ ದಿನವೆ ನಮ್ಮ ಗೆಳೆತನ ಆಧ್ಯಾತ್ಮ ಸಂಬಂಧವಾಯಿತು. ಕಾಮ ಸತ್ತು ಪ್ರೇಮ ಪಟ್ಟವೇರಿತು.

ಬ್ರಹ್ಮಚರ್ಯ ವ್ರತ ತೊಟ್ಟ ದಿನವೇ ನಮ್ಮ ಮುಕ್ತಿ ಪ್ರಾರಂಭ. ಕಸ್ತೂರಿ ಬಾಯಿ ಸ್ವತಂತ್ರಳಾದಳು. ನನ್ನ ಪತಿತ್ವಾಧಿಕಾರದಿಂದ ಆಕೆ ಮುಕ್ತಳಾದಳು. ಆಕೆ ತೃಪ್ತಿಗೊಳಿಸಬೇಕಾಗಿದ್ದ ನನ್ನ ಕಾಮೇಚ್ಛೆಯಿಂದ ನಾ ಮುಕ್ತನಾದೆ. ನನ್ನ ಹೆಂಡತಿಯ ಹಾಗೆ, ನನ್ನನ್ನು ಆ ರೀತಿ ಸೆಳೆದ ಹೆಣ್ಣು ಮತ್ತೊಬ್ಬಳಿಲ್ಲ. ಪೂರ್ಣ ಪತ್ನೀ ವ್ರತಿಯಾಗಿದ್ದೆ .ಆಕೆಗೆ ನಾನುಎಂದೂ ಎರಡು ಬಗೆದವನಲ್ಲ. ನಮ್ಮ ತಾಯ ಇದಿರು ತೊಟ್ಟ ವ್ರತದಲ್ಲಿ ನನಗೆ ತುಂಬಾ ನಿಷ್ಠೆ. ಇನ್ನೊಬ್ಬ ಹೆಂಗಸಿಗೆ ಆಳಾಗುವುದು ಸಾಧ್ಯವಿರಲಿಲ್ಲ. ಬ್ರಹ್ಮಚರ್ಯವ್ರತ ತೊಟ್ಟ ದಿನದಿಂದ ಹೆಣ್ಣು ಎನ್ನುವ ಜೀವವೆಲ್ಲ ತಂಗಿಯೋ ಮಗಳೋ ಆಗಿಹೋಯಿತು. ಹೆಣ್ಣು ಇಂದ್ರಿಯಭೋಗದ ವಸ್ತುವೆಂದು ನಾನು ಯಾವಾಗಲೂ ತಿಳಿದಿಲ್ಲ.

* * *

ನನ್ನ ಹೆಂಡತಿಯನ್ನು ನನ್ನ ಮನಸ್ಸಿಗೆ ತಕ್ಕಂತೆ ಬಗ್ಗಿಸುವ ಪ್ರಯತ್ನ ದಲ್ಲಿ ಆಕೆಯಿಂದ ನಾನೇ ಅಹಿಂಸೆಯ ಪಾಠ ಕಲಿತೆ. ನನ್ನ ಹಟಕ್ಕೆ ಮಣಿ ಯದೆ, ದೃಢವಾಗಿ ವಿರೋಧಿಸುವುದೊಂದು ಕಡೆ ; ನನ್ನ ಮೂರ್ಖ ದೌರ್ಜ ನ್ಯದ ಪೀಡೆಯನ್ನು ಸದ್ದಿಲ್ಲದೆ ಸೈರಿಸುವುದು ಒಂದು ಕಡೆ. ಇದು ನನ್ನನ್ನು

---

"ನಾನೂ ಹಾಗೆಯೆ ಮಾಡಬೇಕಾಗಿತ್ತು. ಹಾಗೆ ಮಾಡದೆ ನಾನು ಚಂಚಲನಾದೆ."

* * *

ಈ ಸಂಗತಿಯನ್ನು ಬಹು ಕಾಲದ ಮೇಲೆ ಯಾರೋ ಕಸ್ತೂರಿಬಾಗೆ ನೆನಪು ಕೊಟ್ಟರು. ಆಕೆಯ ಧೈರ್ಯವನ್ನು ಗಾಂಧೀಜೀ ಹೊಗಳಿದ್ದನ್ನು ಹೇಳಿದರು.

'ಅದು ನನ್ನ ಧೈರ್ಯವಲ್ಲ, ಅವರ ಧೈರ್ಯ. ಅವರ ಧೈರ್ಯ, ಅವರ ತತ್ವಶ್ರದ್ಧೆ, ಅವರ ಸತ್ಯಾರಾಧನೆಗಳೇ ನನ್ನ ಕೈಗಂಬ' ಎಂದರು ಬಾ.

* * *

ನಾಚಿಸಿ ಆಕೆಯನ್ನು ನಾನು ಆಳುವುದಕ್ಕೇ ನಾನು ಹುಟ್ಟಿದೇನೆಂಬ ಪಿತ್ತವನ್ನು ಪೂರಾ ಇಳಿಸಿತು. ಹೀಗಾಗಿ ಪರಿಣಾಮದಲ್ಲಿ ಅಹಿಂಸೆಯ ಹಾದಿಯಲ್ಲಿ ಆಕೆ ನನ್ನ ಗುರು ಆದಳು. ನಾನು ದಕ್ಷಿಣ ಆಫ್ರಿಕಾದಲ್ಲಿ ಮಾಡಿದ್ದೇನು? ಆಕೆ ಅರಿಯದೆ ಅನುಸರಿಸಿದ ಸತ್ಯಾಗ್ರಹ ಧರ್ಮವನ್ನೇ ನಾನು ಅರಿತು ಬೆಳೆಸಿದೆ. ಅಷ್ಟೆ.

* * *

ಬಾ ಏನೆನ್ನುತ್ತಾರೆ ಗೊತ್ತೆ?

'ಬಾಪು ಮಹಾತ್ಮರು. ತಾವು ಮಾಡಿದ ತಪ್ಪನ್ನು ಒಪ್ಪಿಕೊಳ್ಳಬಲ್ಲ ಧೀರರು. ನನಗೆ ಮಾತ್ರ ಅವರು ಯಾವಾಗಲೂ ಅನ್ಯಾಯ ಮಾಡಿಲ್ಲ. ನಾನೇ ಯಾವಾಗಲೂ ತಪ್ಪು ಮಾಡಿದೇನೆ.'

* * *

'ನಾನು ಚಿಕ್ಕಂದಿನಲ್ಲಿ ಶಾಲೆಗೆ ಹೋಗಲಿಲ್ಲ. ಅದಕ್ಕಾಗಿ ಈಗ ಬಹಳ ಪಶ್ಚಾತ್ತಾಪವಾಗುತ್ತದೆ. ಬಾಪೂ ಬಾಳ ಸಂಗಾತಿಯಾಗಿ ಬಂದಾಗ, ನನಗೆ ವಿದ್ಯೆ ಕಲಿಸಬೇಕೆಂದು ಅವರಿಗೆ ಬಹಳ ಆಸೆ. ಅವರಿಗೆ ಎಷ್ಟು ಆತುರವೋ ನನ್ನದು ಅಷ್ಟು ಮಂದ ಗತಿ. ಅಕ್ಷರ ಕಲಿಯಲಿಕ್ಕೇ ಕೆಲವು ತಿಂಗಳಾಯಿತು. ನನ್ನೀ ಜಡ ಬುದ್ಧಿ ನೋಡಿ ಬಾಪೂಗೆ ಒಂದೊಂದು ಸಲ ಬಹು ಅಸಮಾಧಾನವಾಗುತ್ತಿತ್ತು. ಆದರೆ ಬಾಪೂಗೆ ನನ್ನ ಮೇಲ ಯಾವಾಗಲೂ ದಯೆ, ಯಾವಾಗಲೂ ಶಾಂತ ವೃತ್ತಿ.



## ಹನಿಗಳು

೧೯೨೨ರಲ್ಲಿ ಗಾಂಧೀಜಿಗೆ ೬ ವರ್ಷ ಶಿಕ್ಷೆಯಾಯಿತು. ಆ ಮಹಾ ಘಟ್ಟ ಬೇರೆ ಪುಸ್ತಕಗಳಲ್ಲಿ ವರ್ಣಿತವಾಗಿದೆ. ಆಗ ಎಲ್ಲರಿಗಿಂತ ಹೆಚ್ಚು ಮರುಗಬೇಕಾದ ಬಾ ಧೀರಸತಿಯಂತೆ ಮುಂದೆ ಬಂದು ದೇಶಕ್ಕೆ ವೀರಸಂದೇಶ ಕೊಟ್ಟರು. ಆ ಸಂದೇಶ ಅಮರ ಸಾಹಿತ್ಯ.

"ನಮ್ಮ ಯಜಮಾನರಿಗೆ ಇವೊತ್ತು ಆರು ವರ್ಷ ಶಿಕ್ಷೆ ಕೊಟ್ಟಿದಾರೆ. ಈ ದೀರ್ಘಕಾಲ ಶಿಕ್ಷೆಯಿಂದ ನನ್ನ ಮನಸ್ಸು ಕೊಂಚಮಟ್ಟಿಗೆ ವಿಹ್ವಲಗೊಂಡಿದೆ. ಇಲ್ಲವೆನ್ನಲಾರೆ. ಆದರೆ ಈ ಅವಧಿಯನ್ನು ಕಡಮೆ ಮಾಡಿ, ಅವರನ್ನು ಸೆರೆ ಯಿಂದ ಬೇಗ ಬಿಡಿಸುವುದು ನಮ್ಮ ಕೈಯಲ್ಲೇ ಇದೆ-ಎಂಬ ಯೋಚನೆಯೆ ನನ್ನ ಸಮಾಧಾನ.

ಉಪಾಯ ನಮ್ಮ ಕೈಯಲ್ಲೇ ಇದೆ. ಮಾಡಲಾರದೆ ಹೋದರೆ ತಪ್ಪು ನಮ್ಮದಾದೀತು. ನನಗಾಗಿ ಮರುಗುವ, ನನ್ನ ಪತಿಯಲ್ಲಿ ಗೌರವವಿರುವ, ಎಲ್ಲ ಹೆಂಗಸರಿಗೂ ಗಂಡಸರಿಗೂ ನನ್ನದೊಂದೇ ಪ್ರಾರ್ಥನೆ. ಕಾಂಗ್ರೆಸ್ಸಿನ ರಚನಾತ್ಮಕ ಕಾರ್ಯವನ್ನು ತದೇಕ ನಿಷ್ಠೆಯಿಂದ ಮಾಡಿ."

* * * *

ಬಾನ ಹಿರಿಯ ಮಗ ಹೀರಾಲಾಲನದು ಮೊದಲಿಂದಲೂ ಅಡ್ಡದಾರಿ. ತಂದೆ ತನಗೆ ವಿದ್ಯೆ ಕಲಿಸಲಿಲ್ಲವೆಂದು ಚಿಕ್ಕಂದಿನಿಂದ ಅವನಿಗೆಸಿಟ್ಟು. ಅವಿ ಧೇಯನಾಗಿ ದಾರಿ ತಪ್ಪಿ ನಡೆದ. ಒಂದು ಸಲ ಇಸ್ಲಾಂ ಧರ್ಮ ಸ್ವೀಕರಿಸಿದ್ದ. ಆಗ ಬಾನ ತಾಯಿದೆ ನೊಂದು ನೀರಾಯ್ತು. ಆಗ ಮಗನಿಗೆ ಆಕೆ ಬರೆದ ಪತ್ರ ಇದು. ರಸ ಒಸರಿ ಶ್ರೇಷ್ಠ ಸಾಹಿತ್ಯವಾಗಲು ಓದುಬರಿಹ ಅತ್ಯಗತ್ಯ ವಲ್ಲವೆನ್ನಲು ಈ ಸುಂದರ ಪತ್ರವೇ ಸಾಕ್ಷಿ.

"ಮಗು, ಹೀರಾಲಾಲ್ :

ನಿನಗೆ ಏನು ಹೇಳಬೇಕೋ ನನಗೆ ಗೊತ್ತಿಲ್ಲ. ಇಷ್ಟು ಕಾಲವೂ ನಿನಗೆ ಹೇಳುತ್ತಲೇ ಬಂದಿದೇನೆ, ನಿನ್ನನ್ನು ಬೇಡುತ್ತಲೇ ಇದೇನೆ. ಕೊಂಚ

ನಿಗ್ರಹ ಕಲಿ ಎಂತ. ನೀನೇನೋ ಇದ್ದದ್ದೂ ಕೆಡುತ್ತಿದೀಯೆ. ಈಗಂತೂ ನಿನ್ನಿಂದ ನನಗೆ ಬದುಕೇ ಅಸಾಧ್ಯವಾಗಿದೆ. ನಮ್ಮಿಬ್ಬರಿಗೂ ಆಗಲೆ ವಯಸ್ಸಾಗಿ ಹೋಯಿತು. ಈ ಮುದಿತನದಲ್ಲಿ ನಮಗೆ ನೀನು ಕೊಡುತ್ತಿರುವ ಸಂಕಟ ಹೇಳಲಾಸಲ್ಲ.

ನಿಮ್ಮ ತಂದೆ ಯಾರಿಗೂ ಏನೂ ಹೇಳರು. ಆದರೂ ನಿನ್ನ ನಡತೆ ಅವರ ಹೃದಯವನ್ನು ಹೇಗೆ ಭೇದಿಸುತ್ತಿದೆಯೋ ನಾ ಬಲ್ಲೆ. ನಮ್ಮ ಮನಸ್ಸನ್ನು ಹೀಗೆ ತಿಳಿದೂ ತಿಳಿದೂ ನೋಯಿಸಿ ಪಾಪವನ್ನು ಮಡಿಲಲ್ಲಿ ಕಟ್ಟಿಕೊಳ್ಳುತ್ತಿದೀಯೆ. ಮಗನಾಗಿ ಹುಟ್ಟಿ ಹಗೆಯಾಗಿ ನಡೆಯುತ್ತಿದೀಯೆ ನೀನು; ಹೀರಾಲಾಲ್ !

ನಿಮ್ಮ ತಂದೆಯನ್ನು ನಿಂದಿಸುತ್ತೀಯಂತೆ ನೀನು. ನೀನೇನು ಬಲ್ಲೆ ? ಆದರಿಂದ ಅವರಿಗಲ್ಲ, ನಿನಗೇ ಅವಮಾನ. ಅವರಿಗೋ, ನಿನ್ನ ವಿಷಯದಲ್ಲಿ ಅಪಾರ ಪ್ರೀತಿ ; ಬೇರೇನೂ ಇಲ್ಲ. ಅವರಿಗೆ ಪರಿಶುದ್ಧವಾದ ನಡತೆಯೋ ಪ್ರಧಾನ. ಅವರ ಮಾತನ್ನು ಎಂದಾದರೂ ನೀ ಕೇಳಿದ್ದರ ತಾನೆ. ಆದರೂ ನಿನಗೆ 'ಆಸರೆ ಕೊಡುತ್ತೇನೆ ; ಅನ್ನವಸ್ತ್ರ - ವಸತಿ ಕೊಡುತ್ತೇನೆ; ಆರೈಕೆ ಮಾಡುತ್ತೇನೆ' ಎಂದಿದಾರೆ.

ಅವರಿಗೆ ಈ ಜಗತ್ತಿನಲ್ಲಿ ನೂರಾರು ಜವಾಬದಾರಿ ಇವೆ. ಇದಕ್ಕಿಂತ ಹೆಚ್ಚು ನಿನಗೇನೂ ಮಾಡಲಾರರು. ತಮ್ಮ ಅದೃಷ್ಟಕ್ಕಾಗಿ ಕಣ್ಣೀರಿಟ್ಟಾರು. ಅಷ್ಟೆ. ಅವರಿಗೆ ದೇವರು ಅದ್ಭುತ ಮನಶ್ಶಕ್ತಿ ಕೊಟ್ಟಿದಾನೆ ; ಅವರ ಧರ್ಮವನ್ನು ನಿರ್ವಹಿಸಲು ಸಾಕಷ್ಟು ದೀರ್ಘಾಯುಸ್ಸನ್ನು ದೇವರು ಅವರಿಗೆ ಕೊಡಲಿ. ನಾನು ಅವರ ಹಾಗಲ್ಲ. ಅತಿ ದುರ್ಬಲೆ; ವಯಸ್ಸು ಬೇರೆ ಆಗಿದೆ. ನೀನು ಕೊಡುತ್ತಿರುವ ಮನಃಕ್ಲೇಶವನ್ನು ನಾನು ಭರಿಸಲಾರೆ.

ನಿನ್ನ ನಡತೆ ಚೆನ್ನಾಗಿಲ್ಲವೆಂದು ದಿನ ದಿನವೂ ತೆಕ್ಕೆ ತೆಕ್ಕೆ ಕಾಗದ ಬರುತ್ತವೆ ನಿಮ್ಮ ತಂದೆಗೆ. ಆ ಅವಮಾನವನ್ನೆಲ್ಲಾ ಅವರು ನುಂಗಬೇಕು. ನನಗಂತೂ ನಿನ್ನಿಂದ ಈ ಜಗತ್ತಿನಲ್ಲಿ ಎಲ್ಲೂ ಸ್ಥಳವೇ ಇಲ್ಲ. ಪರಿಚಿತರೇನು ಅಪರಿಚಿತರೇನು, ನಾಚಿಕೆಯಿಂದ ಯಾರ ಜೊತೆಗೂ ಹೋಗಲಾರೆ, ಮಾತಾಡಲಾರೆ. ನಿಮ್ಮ ತಂದೆಯೇನೋ ನಿನ್ನನ್ನು ಸದಾ ಕಾಲವೂ ಕ್ಷಮಿಸಿಯಾರು ; ದೇವರು ಮಾತ್ರ ನಿನ್ನ ನಡತೆಯನ್ನು ಕ್ಷಮಿಸಲಾರ.

ದಿನವೂ ಬೆಳಗಾಗ ಎದ್ದೇನೇ, ಏನು ಹೊಸ ಅವಮಾನದ ಸುದ್ದಿ ಬಂದೀತೋ ಎಂದು ಅಂಜಿಯಂಜಿ ಏಳುತ್ತೇನೆ. ಇರುಳು ನಿದ್ದೆಯಲ್ಲಿ ಇದೇ ಚಿಂತೆ. ನಿನ್ನನ್ನು ನೋಡಬೇಕೆನಿಸುತ್ತದೆ. ಎಲ್ಲಿ ನೋಡಲಿ ? ೫೦ ವರ್ಷದ ಮಗ ನೀನು. ಇದಿರಿಗೆ ಸಿಕ್ಕರೆ ನನಗೇ ಏನು ಅವಮಾನಮಾಡೀಯೋ ಎಂದು ನನಗೆ ಹೆದರಿಕೆ.

ನಿನ್ನ ಮಗ ನಿನ್ನಿಂದ ಎಷ್ಟು ನೊಂದುಕೊಂಡಿದಾನೋ ಗೊತ್ತೆ ? ನಿನ್ನ ಹೆಣ್ಣು ಮಕ್ಕಳು ಅಳಿಯಂದಿರು ನಿನ್ನೀ ನಡತೆಯ ನೋವನು ಅತಿ ಕಷ್ಟದಿಂದ ಸಹಿಸುತ್ತಿದಾರೆ.”

* * * *

ಎಷ್ಟೋ ಜನಕ್ಕೆ ಗಾಂಧೀಜೀ ಇಷ್ಟು ಕೆಲಸದ ನಡುವೆ, ಇಷ್ಟು ಗೊಂದಲದ ನಡುವೆ ಸಮಚಿತ್ತರಾಗಿರುತ್ತಾರಲ್ಲಾ ಎಂದು ಆಶ್ಚರ್ಯ. ಒಬ್ಬ ಹೆಂಗಸು ‘ ನಿಮಗೆ ಎಂದಾದರೂ ಸಿಟ್ಟುಬಂದಿದೆಯೆ ?’ ಎಂದು ಕೇಳಿದಳು.

ನೇರಾಗಿ ಬಂತು ಉತ್ತರ: ‘ ಕಸ್ತೂರಿಬಾನ್ನು ಕೇಳು, ಆಕೆ ಹೇಳುತ್ತಾಳೆ: ಜಗತ್ತಿನ ಸಂಗಡ ನಾ ಬಲು ಚೆನ್ನಾಗಿ ನಡೆದುಕೊಳ್ಳುತ್ತೇನೆ; ಆದರೆ ಆಕೆಯ ಸಂಗಡ ಮಾತ್ರ ಹಾಗಿಲ್ಲ ’.

ಆ ಹೆಂಗಸು ಗಾಂಧೀಜಿಯ ಉತ್ತರಕ್ಕೆ ಬೆರಗು ಹೊಂದಿದಳಾಗಲಿ ‘ ನನ್ನ ಗಂಡ ನನ್ನ ಸಂಗಡ ಬಹಳ ಚೆನ್ನಾಗಿದಾನೆ ’ ಎಂದಳು.

ಗಾಂಧೀಜೀ ಥಟ್ಟನೆ ಹೇಳಿದರು: ‘ ಹಾಗಾದರೆ ನಿನ್ನ ಗಂಡ ನಿನಗೇನೋ ಲಂಚಕೊಟ್ಟಿದಾನೆ ’.

* * * *

ಶ್ರೀಮತಿ ವಿಜಯಲಕ್ಷ್ಮಿ ಪಂಡಿತಳ ಮದುವೆಯಲ್ಲಿ ಗಾಂಧೀಜಿಗೂ ಆಕೆಯ ತಾಯಿಗೂ ಅಸಾಧ್ಯ ಮನಸ್ತಾಪ. ಮದುಮಗಳು ಹಸೆಯ ಮೇಲೆ ಉಡಬೇಕಾದ ಸೀರೆ ಖಾದಿಯದಾಗಬೇಕು ಎಂದು ಗಾಂಧೀಜೀ. ಇಲ್ಲ, ಜರತಾರಿ ಪೀತಾಂಬರವಾಗಬೇಕು ಎಂದು ವಧುವಿನ ತಾಯಿ.

ಈ ಜಗಳ ಪ್ರಕೋಪಕ್ಕೆ ಹೋಯಿತು. ಮೋತೀಲಾಲ ನೆಹರು ಅತ್ತಲೂ ಹೇಳದೆ, ಇತ್ತಲೂ ಹೇಳದೆ ಸುಮ್ಮನಿದ್ದರು.

ಕಡೆಗೆ ಕಸ್ತೂರಿಬಾ ಈ ತೊಡಕನ್ನು ಹರಿಸಿದರು. ತಾನೇ ನೂತ ದಾರದಿಂದ ನೇಯಿಸಿದ ಮೆದುವಾದ ಸೀರೆಯೊಂದನ್ನು ಮದುಮಗಳಿಗೆ ಕಾಣಿಕೆ ಕೊಟ್ಟರು. ಆ ಉಡುಗೊರೆಗಿಂತ ಪೀತಾಂಬರವೆ? ಹಸೆಯಮೇಲೆ ಈ ಖಾದೀ ಸೀರೆಯುಟ್ಟು ಮದುಮಗಳು ಕುಳಿತಳು.

* * * *

ಬಿಹಾರ ಪ್ರಾಂತದ ಚಂಪಾರಣ್ಯದಲ್ಲಿ ಭೀತಿಹರವಾ ಎಂಬ ಹಳ್ಳಿಯಲ್ಲಿ ಗಾಂಧೀಜೀ ಇದ್ದರು. ಅಲ್ಲಿ ಹೆಂಗಸರು ಬಲು ಕೊಳಕಾಗಿರುತ್ತಿದ್ದರು. 'ಇವರು ಸೀರೆ ಒಗೆದುಕೊಳ್ಳುವುದಿಲ್ಲವೇಕೋ ಕೇಳು' ಎಂದು ಗಾಂಧೀಜೀ ಕಸ್ತೂರಿಬಾಗೆ ಹೇಳಿದರು. ಬಾ ಅವರಲ್ಲೊಬ್ಬಳನ್ನು ಕರೆದು ಕೇಳಿದರು. ಬಾನನ್ನು ತನ್ನ ಗುಡಿಸಿಲಿಗೆ ಕರೆದೊಯ್ದು ತೋರಿಸಿ ಆಕೆ ಹೇಳಿದಳು: 'ಇಲ್ಲಿ ನೋಡು ತಾಯಿ, ಇಲ್ಲಿ ಪೆಟ್ಟಿಗೆ, ಬೀರು ಏನೂ ಇಲ್ಲ. ಮೈಮೇಲಿರುವ ಈ ಸೀರೆ ಬಿಟ್ಟರೆ ಬೇರೆ ಬಟ್ಟೆ ನನಗೆ ಗತಿಯಿಲ್ಲ. ಇರುವ ಇದೊಂದನ್ನು ಹೇಗೆ ತಾನೆ ಒಗೆಯಲಿ? ಮಹಾತ್ಮರಿಗೆ ಹೇಳು ತಾಯಿ, ಇನ್ನೊಂದು ಸೀರೆ ದಾನ ಮಾಡಲಿ ನನಗೆ. ದಿನವೂ ಒಗೆದ ಸೀರೆ ಉಡುತ್ತೇನೆ. ಹಾಗೆ ಮಾತು ಕೊಡುತ್ತೇನೆ'.

* * * *

ಗಾಂಧೀಜೀ ಆರೋಗ್ಯಕ್ಕಾಗಿ ನಂದೀದುರ್ಗದಲ್ಲಿದ್ದರು. ಅವರಿಗೆ ಆಗ ಬೇಕಾಗಿದ್ದುದು ಪೂರ್ಣ ವಿಶ್ರಾಂತಿ. ಗಾಂಧೀಜಿಗೆ ಬಿಡುವು ಎಂದರೆ ಸೋಮಾರಿತನವಲ್ಲ. ಏನೂ ಮಾಡಬೇಡಿ, ಸುಮ್ಮನಿರಿ ಎಂದು ಗೆಳೆಯರ ಒತ್ತಾಯ.

ಮಾತು ಆಡುತ್ತ ಆಡುತ್ತ 'ಟೋಪೀ ಹೊಲಿದು ಕೊಡಲೇ?' ಎಂದು ಕೇಳಿದರು ಗಾಂಧೀಜೀ.

'ಹೊ. ಅದು ಸರಿ. ಹಾಗಾದರೆ ನಾವು ನಿಜವಾಗಿ 'ಗಾಂಧೀ ಟೋಪಿ' ಯನ್ನೆ ಮಾರಬಹುದು.'

'ಏನು ಹೊಲಿಯಲಾರೆ ಎಂತಲೆ? ಆಫ್ರಿಕಾದಲ್ಲಿ ಕಸ್ತೂರಿ ಬಾಗೆ ಜಾಕೆಟ್ಟು ಹೊಲಿದುಕೊಟ್ಟಿದ್ದೆ. ಆಕೆಯನ್ನು ಕೇಳಿ ನೋಡಿ, ಬೇಕಾದರೆ.

ಆಕೆಗೆ ಅದು ಸರಿಯಾಗಿತ್ತೋ ಇಲ್ಲವೋ, ಅಂತೂ ತೊಡುತ್ತಿದ್ದಳು. ಒಂದು ವೇಳೆ ತೊಡದೆ ಹೋದರೂ ನಾನು ಹೊಲಿದುಕೊಟ್ಟದ್ದು ಮರೆತಾಳೆಯೆ ?'

* * * *

ರಾಜಕೋಟೆಯ ಸತ್ಯಾಗ್ರಹ ೧೯೩೯ ರಲ್ಲಿ ನಡೆದಾಗ ಕಸ್ತೂರಿಬಾಗೆ ತಾನೂ ಅದರಲ್ಲಿ ಪಾಲುಗೊಳ್ಳಬೇಕೆಂದು ಆಸೆ. ಆದರೆ ಆಕೆಗೆ ಮೈ ಹಣ್ಣಾಗಿತ್ತು. ಸೆರೆಯ ಕಷ್ಟವನ್ನು ಸಹಿಸುವ ದಾರ್ಢ್ಯವಿರಲಿಲ್ಲ. ಅಷ್ಟೇ ಅಲ್ಲ, ಗಾಂಧೀಜೀ ಆಕೆಯನ್ನು ಸತ್ಯಾಗ್ರಹಕ್ಕೆ ಕಳಿಸಬಾರದು; ಆದರಿಂದ ರಾಜಕೋಟೆಯ ದೊರೆಗೆ ಇಲ್ಲದ ಒತ್ತಾಯ ತಂದಂತೆ ಎಂದು ಜನ ಆಡಿಕೊಂಡರು.

ಆದರೆ ಮಣಿಬೇನ್ ಸೆರೆಯಾದ ಸುದ್ದಿ ಕೇಳಿ ಬಾಗೆ ಇನ್ನು ತಡೆಯುವುದಾಗಲಿಲ್ಲ. ಬಹಳ ದುರ್ಬಲಳಾಗಿದ್ದೀಯೆ ಬೇಡ ಎಂದು ಬಾಪೂ ಬಹಳ ಹೇಳಿದರು. ನಾಲ್ಕೇ ದಿನ ಮೊದಲು ಸ್ನಾನ ಮಾಡುತ್ತ ಬಚ್ಚಲಲ್ಲೇ ಎಚ್ಚರ ತಪ್ಪಿ ಬಿದ್ದಿದ್ದರು ಬಾ. ದೇವದಾಸರು ಅಲ್ಲೇ ಇದ್ದುದರಿಂದ ಜೀವ ಉಳಿಯಿತು. ಆದರೂ ಬಾ ಕೇಳಲಿಲ್ಲ.

ಕಸ್ತೂರಿಬಾ ರಾಜಕೋಟೆಯ ಸಂತಾನ. ಆಕೆಗೆ ಆ ಸತ್ಯಾಗ್ರಹ ಅಗತ್ಯ ಕರ್ತವ್ಯವಾಗಿ ಕಂಡಿತು.

ಅಲ್ಲೇ ಆಕೆಯ ಆರೋಗ್ಯ ಕೆಟ್ಟದ್ದು.

* * * *

ಒಂದಲ್ಲ ಹತ್ತು ಬಗೆಯ ಕಷ್ಟವನ್ನು ಸಹಿಸಿದಾಳೆ ಬಾ. ಗಾಂಧೀಜೀ ತಮ್ಮ ಮೈಯನ್ನೇ-ಪ್ರಾಣವನ್ನೂ-ಲಕ್ಷಿಸದ ಕರ್ಮಯೋಗಿ, ವ್ರತಚಾರಿ. ಎಷ್ಟು ವ್ರತ, ಎಷ್ಟು ಉಪವಾಸ! ೨೧ ದಿನದ ಉಪವಾಸವನ್ನೆ ಮಾಡಿದರು. 'ಇಲ್ಲ ಕೆಲಸವಾಗಬೇಕು, ಇಲ್ಲ ಪ್ರಾಣಹೋಗಬೇಕು' ಎಂದು ಪ್ರಾಯೋಪವೇಶವನ್ನೆ ಮಾಡಿದರು. ಪ್ರಾಣಪಣವನ್ನೆ ಒಡ್ಡಿದರು. ಗಾಂಧೀಜೀ ಈ ತಪಸ್ಸನ್ನು ಆಚರಿಸುತ್ತಿದ್ದಾಗ ತಾಯಿ ಕಸ್ತೂರಿಬಾ ಪಕ್ಕದಲ್ಲೇ ಕೂತು, ದಿನ ದಿನವೂ ಇಳಿದು ಹೋಗುತ್ತಿದ್ದ ಈ ಪ್ರಾಣಜಲತರಂಗ ಕ್ರೀಡೆಯನ್ನು ಕಣ್ಣಾರ ನೋಡಿ ಹೇಗೆ ಮನಸ್ಸನ್ನು ಬಿಗಿಹಿಡಿದಿರುತ್ತಿದ್ದಳೋ ! ಪ್ರಾಣ ನೀಗುವುದೂ ಹಿಂದೂ ಹೆಂಗಸಿಗೆ ದೊಡ್ಡದಲ್ಲ ; ತನ್ನ ಮಾಂಗಲ್ಯ ನೀಗುವುದು—

ಓ, ಊಹಿಸಲಾಗದ ಮನೋದಾರ್ಢ್ಯ ಅದು. ಗಾಂಧೀಜೀ ಅದ್ಭುತ ಸಂಕಲ್ಪರೇ ನಿಜ. ಆದರೆ ಕಸ್ತೂರಿಬಾ ಅವರಿಗಿಂತ ಒಂದು ತೂಕ ಹೆಚ್ಚೋ ಏನೋ! ಹೇಳಬಲ್ಲವರಾರು?

* * * *

ಅಂಥ ಕಸ್ತೂರಿಬಾ ಕೂಡ ರಾಜಕೋಟೆಯಲ್ಲಿ ಗಾಂಧೀಜೀ ಪ್ರಾಯೋಪವೇಶ ಮಾಡಿದಾಗ ತನಗೆ ಮೊದಲು ಒಂದು ಮಾತೂ ಕೂಡಾ ತಿಳಿಸಲಿಲ್ಲವಲ್ಲ ಎಂದು ವ್ಯಥೆಪಟ್ಟು, ಹಾಗೆ ಹೇಳಿಕಳಿಸಿದರು.

'ಆದಕ್ಕಾಗಿ ಚಿಂತೆ ಬೇಡ. ದೇವರ ಅಪ್ಪಣೆ ನಡಸುತ್ತಿದೇನೆ. ನನಗೆ ತಾನೆ ಏನು ಗೊತ್ತು ಮೊದಲು? ದೇವರ ಅಪ್ಪಣೆಯಾದಾಗ ಯಾರನ್ನು ಕೇಳಲಾದೀತು? ಯಾರಿಗಾಗಿ ತಡೆಯಲಾದೀತು? ಎಂದಾದರೊಂದುದಿನ ಆ ಕರೆ ಬಾರದೆ ಇದ್ದೀತೆ?' ಎಂದು ಗಾಂಧೀಜೀ ತಿಳಿಸಿದರು. ಜೊತೆಗೆ ಇನ್ನೊಂದು ಮಾತನ್ನು ತಿಳಿಸಿದರು: ಈ ಉಪವಾಸದ ಸಂದರ್ಭದಲ್ಲಿ ತಮ್ಮ ಜೊತೆಗೆ ಇರಬಯಸುವುದಾದರೆ ಅಧಿಕಾರಿಗಳನ್ನು ಕೇಳುತ್ತೇನೆ.

ಕಸ್ತೂರಿ ಬಾ ಹೇಳಿ ಕಳಿಸಿದ ಉತ್ತರ ಆ ಧೀರ ಸತಿಗೆ ಅನುಗುಣವಾಗಿದೆ. "ಬೇಡ, ದಿನವೂ ಅವರ ಸುದ್ದಿ ತಿಳಿಸಿದರೆ ನನಗಷ್ಟೇ ಸಾಕು. ಇಷ್ಟು ದಿನ, ಹಿಂದಿನ ಅಗ್ನಿಪರೀಕ್ಷೆಗಳಲ್ಲೆಲ್ಲ ಅವರನ್ನು ಕಾಪಾಡಿದ ದೇವರು ಈಗಲೂ ಕಾಪಾಡುತ್ತಾನೆ. ಆದರೂ ಈ ಪರೀಕ್ಷೆಗೆ ಪದೇ ಪದೇ ಒಡ್ಡಿಕೊಳ್ಳುವುದು ಕ್ಷೇಮವೆ? ಪ್ರಮಾದವಾಗದೆ?"

ಗಾಂಧೀಜೀ ತಿಳಿಸಿದರು: "ಆದೀತು. ಆತ್ಮೋಪವಾಸಕ್ಕೆ, ಅದರ ಫಲವಲ್ಲ ಅಳತೆ; ದೈವಸಂಕಲ್ಪಕ್ಕೆ ನಿಸ್ಸಂಕೋಚವಾದ ಆನಂದಪೂರ್ಣ ಶರಣಾಗತಿ. ಕರ್ತವ್ಯ ಪರಿಪಾಲನೆಯಲ್ಲಿ ಸಾವು ಬಂದರೂ ಅದಕ್ಕೆ ಕೈಯೊಡ್ಡಬೇಕು. ಸ್ವಾಮಿಕಾರ್ಯಕ್ಕೆ ಮಡಿದರೂ ಸರಿಯೆ."

* * * *

ಶ್ರೀಮತಿ ಮಿಲ್ಲೀ ಪೋಲಕ್ ಗಾಂಧೀಜಿಯ ಕುಟುಂಬಕ್ಕೆ ಸೇರಿದ ಹಾಗೇ ದಕ್ಷಿಣ ಆಫ್ರಿಕಾದಲ್ಲಿ ಅವರ ಜೊತೆಗೆ ವಾಸಿಸುತ್ತಿದ್ದರು. ಕಸ್ತೂರಿ

ಬಾಗೆ ಒಂದು ಬಗೆಯಲ್ಲಿ ತಂಗಿ, ಒಂದು ಬಗೆಯಲ್ಲಿ ಓರಗಿತ್ತಿ ಇದ್ದಹಾಗೆ. ಆಕೆ ಬಾ ಬಗ್ಗೆ ಕೆಲವು ಸಂಗತಿ ಹೇಳಿದಾಳೆ:

"ಕಸ್ತೂರಿಬಾಗೆ ಇಂಗ್ಲಿಷು ಚೆನ್ನಾಗಿ ಮಾತಾಡಲು ಬರುತ್ತಿರಲಿಲ್ಲ. ಆದ್ದರಿಂದ ನಮ್ಮ ಚರ್ಚೆಗಳಿಗೆ ಆಕೆ ಬರುತ್ತಿರಲಿಲ್ಲ. ನನ್ನ ಗಂಡ ಗಾಂಧೀಜೀ ಇಬ್ಬರೂ ಕಚೇರಿಗೆ ಹೋಗುತ್ತಿದ್ದರು. ಮನೆಯಲ್ಲಿ ನಾವಿಬ್ಬರೇ. ಇಬ್ಬರೂ ಮಾತುಕತೆ ಆಡತೊಡಗಿದೆವು. ಕೆಲವು ದಿನದಲ್ಲೇ ಆಕೆಯ ಇಂಗ್ಲೀಷು ಉತ್ತಮವಾಯಿತು.

'ಉಳಿದೆಲ್ಲ ತಾಯಂದಿರಂತೆ ಕಸ್ತೂರಿಬಾಗೂ ತನ್ನ ಮಕ್ಕಳ ಮೇಲೆ ತುಂಬಾ ಅಭಿಮಾನ; ಅವರ ಬಗ್ಗೆ ಹೆಮ್ಮೆ, ನೂರು ಆಸೆ. ಅವರು ಒಳ್ಳೇ ಬಟ್ಟೇ ಬರೆ ಉಡಲಿ ಎಂಬುದೂ ಆಕೆಗೊಂದು ಬಯಕೆ ಮನೆಯಲ್ಲಿ ಆಕೆಯನ್ನು ಬಿಟ್ಟು ಉಳಿದವರೆಲ್ಲ ಯೂರೋಪಿಯನ್ ಉಡಿಗೆ ಉಡುತ್ತಿದ್ದರು. ಹುಡುಗರಿಗೆ ಹೊಸ ಬೂಡ್ಸಾಗಲಿ ಸೂಟಾಗಲಿ ಬೇಕಾಗಿದ್ದು, ಗಾಂಧೀಜೀ ಅತ್ತಕಡೆ ಗಮನಕೊಡದಿದ್ದರೆ, ಆಕೆ 'ಬಾಪೂಗೆ ನೀನಾದರೂ ಹೇಳು' ಎಂದು ನನಗೆ ಹೇಳುತ್ತಿದ್ದರು. ನಾನು ಬಾಪೂಗೆ ಹೇಳುತ್ತಿದ್ದೆ."

* * * *

"ಜೂಲೂ ದಂಗೆ.

ನೇಟಾಲಿನಲ್ಲಿ ದೇಶೀ ಜನ ಸರಕಾರದ ಮೇಲೆ ತಿರುಗಿಬಿದ್ದರು. ಯುದ್ಧವಾಯಿತು. ಆಗ ಅಲ್ಲಿ ಗಾಯಗೊಂಡವರನ್ನು ಚಿಕಿತ್ಸೆಗಾಗಿ ಸಾಗಿಸಲು ಒಂದು 'ಡೋಲಿದಳ' ವನ್ನು ಗಾಂಧೀಜೀ ಏರ್ಪಡಿಸಿದರು. ತಾವೇ ತಿದ್ದಿ ತಯಾರಿಸಿದ ಕೆಲಸಗಾರರ ಗುಂಪಿನೊಡನೆ ಗಾಂಧೀಜೀ ಸಮರರಂಗಕ್ಕೆ ಹೊರಟರು.

ತನ್ನ ಗಂಡ ಹಾಕಿದ ಈ ಹೊಸ ಹೆಜ್ಜೆ ನೋಡಿ ಬಾಗೆ ಸ್ವಾಭಾವಿಕವಾಗಿಯೆ ತುಂಬಾ ಯೋಚನೆಯಾಯಿತು.

ದೇವರ ದಯೆ! ಬೇಗನೆ ದಂಗೆ ಅಡಗಿತು.

* * * *

"ಒಂದು ಸಲ ಯಾರೋ ಯೂರೋಪಿಯನ್‌ರು ಗಾಂಧೀಜಿಯ ಮನೆಗೆ ಅಭ್ಯಾಗತರಾಗಿ ಬಂದರು. ಗಾಂಧೀಜಿಗೆ ಅವರ ಪರಿಚಯ ಹೆಚ್ಚಾಗಿರಲಿಲ್ಲ.

ಬಾಗಂತೂ ಇಲ್ಲವೇ ಇಲ್ಲ. ಬಂದವರು ನಿಸ್ಸಂಕೋಚವಾಗಿ, ಒರಟಾಗಿ ಮನೆಯ ವಿಚಾರವನ್ನೆಲ್ಲಾ ಪ್ರಶ್ನಿಸಲಾರಂಭಿಸಿದರು. ಅವರು ಕೇಳುತ್ತಿದ್ದ ರೀತಿ ಕೂಡ ಏನೋ ಒಂದು ಠೇಂಕಾರದ್ದು, ಗಾಂಧೀಜಿಯೋ ಬಹಳ ವಿಶ್ವಾಸ, ಕರುಣೆಯಿಂದಲೇ ಉತ್ತರಕೊಟ್ಟರು. ಬಂದವರು ಭಾರತೀಯರು ಮಾಡುವುದರ ಬಗ್ಗೆ, ಮಾಡದುದರ ಬಗ್ಗೆ ಅವರು ಹೇಳಿದ ಮಾತು ಕೇಳಿ ನಗುತ್ತಿದ್ದರು. ಮೊದಲಿಂದಲೂ ಬಾಗೆ ಅವರ ಮೇಲೆ ಸಿಟ್ಟೇ. ಊಟದ ಹೊತ್ತಿಗೆ ಆಕೆ ಎಲ್ಲೋ ಮಾಯ. ಗಾಂಧೀಜೀ ಹೇಳಿಕಳುಹಿಸಿದರೂ ಬರಲಿಲ್ಲ. ಅವರೇ ಹುಡುಕಿಕೊಂಡು ಬರಲು ಹೋದರು. ಬಾ ತಮ್ಮ ಕೋಣೆಯಲ್ಲಿದ್ದರಾಗಲಿ ಏನುಮಾಡಿದರೂ ಬರಲಿಲ್ಲ. ಗಾಂಧೀಜೀ ಹಿಂದಿರುಗಿ ಬಂದು ಏನೋ ನೆಪ ಹೇಳಿದರು. ಅಂತೂ ಊಟ ಮುಗಿಯಿತು.

ಮರುದಿನ ಬಾ ಹೇಳಿದರು: 'ಕೇವಲ ಕುರುಡು ಕುತೂಹಲಕ್ಕಾಗಿ ನಮ್ಮ ಮನೆಗೆ ಬಂದು, ನಮ್ಮನ್ನೇ ಹಾಸ್ಯಮಾಡುವುದು ನನಗೆ ಸ್ವಲ್ಪವೂ ಸೇರದು. ಅಂಥವರು ಬಂದರೆ ನಾನವರ ಮೋರೆಯನ್ನೇ ನೋಡುವುದಿಲ್ಲ. ಬಾಪೂ ಬೇಕಾದರೆ ಮಾತಾಡಿಸಲಿ.'

ಗಾಂಧೀಜೀ ಆಕೆಯನ್ನು ಸಂತಯಿಸಲು ಏನೇನೋ ಹೇಳಿದರು. ಆದರೆ ಬಾ ತಮ್ಮ ಪಟ್ಟು ಸಡಲಿಸಲಿಲ್ಲ.

* * * *

"ಒಂದು ಸಲ ನನ್ನ ಗಂಡನಿಗೆ ಬಾಪೂ ಮೇಲೆ ಸಿಟ್ಟು ಬಂದಿತ್ತು. ಏಕೋ ನನಗೇ ಗೊತ್ತಿರಲಿಲ್ಲ, ಗಾಂಧೀಜಿಯೊಡನೆ ಮಾತು ಬಿಟ್ಟಿದ್ದರು.

ಇದನ್ನು ನೋಡಿ ಬಾ ಕೇಳಿದರು: 'ಯಾಕೆ? ಪೋಲಕ್ ಸಿಟ್ಟಾಗಿದಾನೆ?'

'ಆತನಿಗೆ ಬಾಪೂ ಮೇಲೆ ಸಿಟ್ಟು ಬಂದಿದೆ.'

'ಬಾಪೂ ಮೇಲೇಕೆ ಸಿಟ್ಟು? ಬಾಪೂ ಏನು ಮಾಡಿದರು?'

ನನಗೆ ತಿಳಿದಷ್ಟು ವಿಷಯ ಹೇಳಿದೆ.

ಅದನ್ನು ಕೇಳಿ ಬಾ ಯಾರ ವಿಷಯವಾಗಿಯೂ ಏನೂ ಹೇಳಲಿಲ್ಲ. ಸುಮ್ಮನೆ 'ಹಾಗೋ' ಎಂದುಬಿಟ್ಟರು. ಬಾಪೂ ಮೇಲೆ ಪೋಲಕ್ ಸಿಟ್ಟು

ಗೊಂಡದ್ದು ಆಕೆಗೇನೂ ಕೆಡುಕೆನಿಸಲಿಲ್ಲ. ಆಕೆಯೂ ಎಷ್ಟೋ ಸಲ ಗಾಂಧೀಜಿಯ ಮೇಲೆ ಸಿಟ್ಟಾಗುತ್ತಿದ್ದರು. ಅಂತೆಯೆ ತಮ್ಮಷ್ಟೆ ಗಾಂಧೀಜಿಯನ್ನು ಪ್ರೀತಿಸುತ್ತಿದ್ದ ಮತ್ತೊಬ್ಬ ವ್ಯಕ್ತಿ ಅವರ ಮೇಲೆ ಮುನಿಸಿದ್ದರಿಂದ ತಮ್ಮ ಸಿಟ್ಟು ಸರಿ ಎನಿಸಿರಬೇಕು ಇದರಿಂದ.

* * * *

"ಬಾಗೆ ಒಂದು ಸಲ ರಕ್ತಕ್ಷಯ ಬಂತು. ಆರೋಗ್ಯ ಚಿಂತಾಜನಕವಾಗಿ ವಿಷ ಘಟ್ಟಕ್ಕೇ ಮುಟ್ಟಿತು. ನಾವೆಲ್ಲಾ ಉಸಿರು ಬಿಗಿಹಿಡಿದು ಕಾಯುತ್ತಿದ್ದೆವು. ಯಾವ ಗಳಿಗೆಗೆ ಏನೋ ಎಂಬ ಕಳವಳ! ಗಾಂಧೀಜಿಗೆ ತಂತಿ ಕೊಟ್ಟೆವು. ಬಾ ಮಾತ್ರ ಬಾಪೂಗೆ ತೊಂದರೆ ಕೊಡಬೇಡಿ ಎಂದೇ ಹಟ ಹಿಡಿದಿದ್ದರು. ಅವರಿಗೆ ಎಚ್ಚರವಿರುವನಕ ತಂತಿ ಕೊಡಲಾಗಲಿಲ್ಲ.

ಮರುದಿನವೇ ಗಾಂಧೀಜೀ ಬಂದರು. ಬಾ ಬದುಕುವ ಆಶೆಯಿರಲಿಲ್ಲ. ವಾರವೋ ಎರಡು ವಾರವೋ!

ಗಾಂಧೀಜೀ ಉಳಿದೆಲ್ಲ ಕೆಲಸವನ್ನೂ ಬದಿಗಿರಿಸಿ ಬಾಗೆ ಉಪಚಾರ ಮಾಡತೊಡಗಿದರು. ಒಮ್ಮೆ ಬಾಗೆ ಕೊಂಚ ಎಚ್ಚರ ಬಂತು. 'ನನ್ನಲ್ಲಿ ಪೂರ್ಣ ಭರವಸೆಯಿದೆಯೇ ನಿನಗೆ' ಎಂದು ಆಕೆಯನ್ನು ಕೇಳಿದರು. 'ಹೂ' ಎಂದರು. 'ನಾನೇ ಔಷಧ ಕೊಡುತ್ತೇನೆ ತಗೋತೀಯಾ?' ಎಂದರು. ಬಾ ಒಪ್ಪಿದರು; ಗಾಂಧೀಜಿಯ ಮೇಲೇ ಪೂರ್ಣ ಭಾರ ಹಾಕಿಬಿಟ್ಟರು.

ಮುಂದೆ ಎರಡು ವಾರ ಬಾನ ಹಾಸಿಗೆಯ ಪಕ್ಕ ಬಿಟ್ಟು ಸರಿಯಲಿಲ್ಲ ಬಾಪೂ. ಆಗಾಗ ನಿಂಬೇ ಹಣ್ಣಿನ ರಸ ಕೊಡುತ್ತಿದ್ದರು, ಅಷ್ಟೆ. ಬಾಗೆ ಧೈರ್ಯ ಹೇಳುತ್ತಾ ತೀರ ನಿಶ್ಶಕ್ತಳಾದ ಹೆಣ್ಣು ರೋಗಿಗೆ ಮಾಡಬೇಕಾದ ಆರೈಕೆಯನ್ನೆಲ್ಲಾ ತಾವೇ ಮಾಡುತ್ತಿದ್ದರು. ಮತ್ತಾರಿಗೂ ಅದರಲ್ಲಿ ಅವಕಾಶ ಕೊಡುತ್ತಿರಲಿಲ್ಲ. ಎರಡು ವಾರ ಬಾನ ಜೀವ ಸಾವು ಬದುಕಿನ ನಡುವೆ ಜೋಲಿಯಾಡುತ್ತಿತ್ತು.

ಕ್ರಮೇಣ ಬಾಗೆ ಗುಣವಾಯಿತು. ರೋಗ ಒಂದು ಸಾರಿಯೂ ಮರುಕಳಿಸಲಿಲ್ಲ. ದಿನದಿನಕ್ಕೆ ದೃಢವಾದರು. ಅಲ್ಲಿಂದೀಚೆಗೆ ೩೦-೩೫ ವರ್ಷ

ಬದುಕಿದಾರೆ ಬಾ. ಕಠಿಣವಾದ ಬಾಳು ನಡೆಸಿದಾರೆ. ಒಂದು ಸಲವೂ ಹಾಸಿಗೆ ಹಿಡಿಯಲಿಲ್ಲ. ಗಾಂಧೀಜಿಯ ವೈದ್ಯದ ಪ್ರಭಾವ ಅಂಥದು !"

* * * *

"ಆ ಸಲ ಸತ್ಯಾಗ್ರಹದಲ್ಲಿ ಹೆಂಗಸರೂ ಧುಮುಕಿದರು. ಸಣ್ಣದೊಂದು ಹೆಂಗಸರ ಗುಂಪು ಕಟ್ಟಿಕೊಂಡು ಬಾ ಆ ಸುಳಿಯಲ್ಲಿ ಇಳಿದರು. ಮೂರು ತಿಂಗಳ ಶಿಕ್ಷೆಯಾಯ್ತು.

ಸೆರೆಯಿಂದ ಬಾ ಹೊರಗೆ ಬಂದಾಗ ಗಾಂಧೀಜಿಯ ಜೊತೆಗೆ ನಾನೂ ಸೆರೆಮನೆಯ ಬಾಗಿಲಿಗೆ ಹೋಗಿದ್ದೆ.

ತಾ ಮಾಡಿದ ಸಾಹಸವನ್ನು ಗಾಂಧೀಜೀ ಹೊಗಳುತ್ತಿದ್ದರೆ ಬಾನ ಕಣ್ಣಲ್ಲಿ ಎಷ್ಟು ನಾಚಿಕೆ ತುಂಬಿತ್ತೋ ! ಎಂಥ ನಾಚಿಕೆ ತುಂಬಿತ್ತೋ !

* * * *

"ಇಂಡಿಯನ್ ಒಪಿನಿಯನ್ ವಾರಪತ್ರಿಕೆ. ಪ್ರಕಟವಾಗುವ ದಿನ ಇದ್ದವರೆಲ್ಲರೂ ಕೆಲಸ ಮಾಡಿದರೂ ತೀರದು. ನಮಗೆ ಯಾವ ವಿಶೇಷ ಕೆಲಸವೂ ಬರುತ್ತಿರಲಿಲ್ಲ. ಆದ್ದರಿಂದ ಬಾನೂ-ನಾನೂ ಅಚ್ಚು ಯಂತ್ರದಿಂದ ಬಂದ ಪತ್ರಿಕೆಗಳನ್ನು ಹಾಗೇ ಮಡಚಿ, ಮೇಲೆ ಕಾಗದ ಸುತ್ತುತ್ತಿದ್ದೆವು. ಪತ್ರಿಕೆ ಕೆಲಸ ಮುಗಿಯುವಾಗ ನಡು ರಾತ್ರಿಯಾಗುತ್ತಿತ್ತು. ಇನ್ನೂ ಹೊತ್ತಾಗುತ್ತಿದ್ದುದೂ ಉಂಟು. ಆಗ ನಾವೆಲ್ಲ ಗುಂಪಾಗಿ ಬಾನನ್ನೂ, ಗಾಂಧೀಜಿಯನ್ನೂ ಅವರ ಮನೆ ಬಾಗಿಲವರೆಗೆ ಬಿಟ್ಟು ಬರುತ್ತಿದ್ದೆವು.

——::——

ಮುದ್ರಕರು :
ಎಚ್. ಎಲ್. ಪ್ರಸಾದ್,
ಟೌನ್ ಪ್ರೆಸ್, ಚಿಕ್ಕಪೇಟೆ ರೋಡ್, ಬೆಂಗಳೂರು ನಗರ